41 ತ್ರಿದ್ಧೇಶ್ವರದೇವರ್ಗ್ಗೆ ಗೀತವಾದ್ಯನೃತ್ಯಕ್ಕೆ ವೇದಿ ಯರೆಯ ಹೇಱುಂಗೆ ಮುನ್ನಿನ ನಡೆವರೆ ೫ ವೀಸಪೊ—

42 ಳಗಾಗಿ ಹೇಱುಂಗೊಂದು ವೀಸಮಂ ಚಂದ್ರಾರ್ಕ್ಕತಾರಂಬರಂ ನಡೆವನ್ತಾಗಿ ಬಿಟ್ಟರಿನ್ತೀ ಧರ್ಮ್ಮಮ—

43 ನಾರೋರ್ವ್ವರು ಪ್ರತಿಪಾಳಿಸಿದವರ್ಗ್ಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಗ್ಘ—

44 ತೀರ್ತ್ಥಂಗಳೊಳು ಸಾಸಿರ ಕವಿಲೆಗಳ ಕೋಡುಂ ಕೊಳಗುಮಂ ಪೊನ್ನುಂ ಬೆಳ್ಳಿಯೊಳುಂ ಕಟ್ಟಿಸಿ ಸಾ—

45 ಸಿರ್ವ್ವರ್ವ್ವೇದಪಾರಗರಪ್ಪ ಬ್ರಾಹ್ಮಣರಿಗೆ ಕೊಟ್ಟ ಫಳಮನೆಯ್ದುವರೀ ಧರ್ಮ್ಮವನಾರೋ—

46 ರ್ವ್ವರಳಿದವರನಿತು ತೀರ್ತ್ಥಂಗಳೊಳನಿತು ಕವಿಲೆಗಳನನಿಬರು ಬ್ರಾಹ್ಮಣರುಮಂ ಕೊಂದ

47 ಮಹಾಪಾತಕಮನೆಯ್ದುವರ್ ॥ ⓞ ಸ್ವದತ್ತಂ ಪರದತ್ತಂ ವಾ ಯೋ ಧರ್ಮ್ಮಂ ಹರತೇ ನರಃ । ಷಷ್ಟಿ—

48 ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥ ⓞ ಪ್ರಣುತಾರ್ತ್ಥಂ ಹ್ಯದ್ಯಮೀ ಪದ್ಯನಿ—

49 ಚಯಮನೆ ಪೇಳ್ದಂ ಮನಂಗೊಂಡು ವಿದ್ವದ್ಗಣಮತ್ಯಾನಂದದಿಂ ಬಣ್ಣಿಸೆ ಬರೆದನಿ—

50 ದಂ ಸತ್ಕವೀಂದ್ರಸ್ತುತಂ ನಾರಣದೇವಂ ಪಾರ್ವ್ವತೀವಲ್ಲಭಪದಯುಗಳಾರಾಧಕಂ ವಿಪ್ರವಂಶಾ—

51 ಗ್ರಣಿ ವಿಶ್ವಾಮಿತ್ರಗೋತ್ರಾಂಬುರುಹವನಪತಂಗಂ ವಿಶುದ್ಧಾನ್ತರಂಗ ॥

## No. 109

*(B. K. No. 177 of 1933-34)*

KANNŪR, BIJAPUR TALUK, BIJAPUR DISTRICT.

*Slab set up in the Bhajana-maṭha.*

**Vikramāditya VI—A. D. 1112**

This inscription referring itself to the reign of **Tribhuvanamalla,** is dated in the **Chālukya-Vikrama year 37**, **Nandana**, **Pushya, śu. 12**, **Sunday**, **Uttarāyaṇa-saṁkramaṇa** The date is irregular. The *tithi* cited corresponds to **A. D. 1112, December 31**. The week-day was **Tuesday** and not Sunday as given in the record; nor did the *saṁkramaṇa* occur on that day.

It records a grant of land made by *Mahāsāmantādhipati* **Kāḷidāsa-Daṇḍanāyaka** to the temple of Pārśvanātha, constructed by **Bijji-seṭṭi** at **Kannavuri**. **Arhaṇandi Beṭṭadadēva** of *Keṇḍakund-ānvaya*, *Mūla-saṁgha*, *Dēsi-gaṇa*, *Pustaka-gachchha* and *Piriya-samudāya* and belonging to the spiritual lineage of **Koṇḍakoṇḍāchārya,** is stated to be the *Guru* of **Bijjidēva**. **Kāḷidāsa** is stated to be governing **Kannavūri.**

### Text

1 ⓞ ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಂ ಜೀಯಾತ್ತ್ರೈಳೋಕ್ಯನಾಥಸ್ಯ ಶಾಸ—

2 ನಂ ಜಿನಶಾಸನಂ ॥ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾ—

3 ರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳು—

4 ಕ್ಯಾಭರಣಂ [।] ಶ್ರೀಮತ್ತ್ರಿಭುವನಮಲ್ಲನಿಳಾಮಹಿತಂ ನಹುಷಪ್ರಿಥುಭ—

5 ಗೀರಥಚರಿತಂ ಭೂಮಣ್ಡಳಮಂ ಸಕಳಾಸಾಮಣ್ಡಳಮವಧಿಯಪ್ಪಿನಂ ಸಾ—

6 ಧಿಸಿದಂ ॥ ವೃತ್ತ ॥ ಉಡೆನೂಲೇಳುಂ ಕಡಲ್ಸುತ್ತೆನ್ನೆಸೆಗ್ ಜಸಮೆ ಪೂಮಾಲೆ ತಾರಾಚಳಂ

7 ಕನ್ನಡಿ ಗಂಗಾಸಿನ್ಧು ಮುಕ್ತಾವಳಿ ಸಕಳ ದಿಷಾಧೀಶರೊಳ್ದಿಜ್ಜಗೋಪಂಗೆಡೆಗೊಣ್ಡ-
8 ರ್ದ್ಧಜ್ಜರಾತ್ಮಾಂಗನೆ ವಸುಧೆಗೆನರ್ಕ್ಕೋಡಷೋರ್ವ್ವಿಪರಂ ನೂರ್ಮ್ಮಡಿಯಾದಂ ಸಾ-
9 ರ್ವ್ವಥ್ವೋನ್ನತಿಯ ಮಹಿಮೆಯಿಂ ವಿಕ್ರಮಾದಿತ್ಯದೇವಂ ॥ ತತ್ಪಾದಪದ್ಮೋಪ-
10 ಜೀವಿ ಸಮಧಿಗತಪಂಚಮಹಾಶಬ್ದ ಮಹಾಸಾಮ(ಂ)ನ್ತಾಧಿಪತಿ ಮಹಾಪ್ರ-
11 ಚಣ್ಡದಣ್ಡನಾಯಕಂ ॥ ಕ॥ ಅಭಿವರ್ಣ್ಣಿಸೆ ಭುವನಜನಂ ಪ್ರಭುಮಂತ್ರೋ-
12 ತ್ಸಾಹಶಕ್ತಿಯಿಂ ತಳೆದಿರ್ದ್ದಂ ತ್ರಿಭುವನಮಲ್ಲನ ಸಾಮ್ರಾಜ್ಯಭಾರಮಂ
13 ಕಾಳಿದಾಸದಣ್ಡಾಧೀಶಂ ॥ ಪರಪುರಮಂ ಕೋಪಾಗ್ನಿಯಿನುರ್ಪುವ ಬೆಸದೆ-
14 ಡೆಗೆ ಪವನಸುತನಂ ರಾಮಂ ಕರೆವಂ ಚಾಳುಕ್ಯರಾಮಂ ಕರೆವಂ ಕಲಿಕಾಳಿದಾಸ-
15 ದಣ್ಡಾಧಿಪನಂ ॥ ಕಂ ॥ ಹತಿಪಲಮಾರ[ಂ] ನಾಡಂ ಪ್ರತಿಪತ್ತಿಯನೀಯೆ ವಿಕ್ರ-
16 ಮಾಂಕಂ ಸೇನಾಪತಿ ಕಾಳಿದಾಸನತ್ಯೂರ್ಜ್ಜಿತಶೌರ್ಯ್ಯಂ ಕನ್ನಪುರಿಯನಾಳು-
17 ತ್ತಿರ್ದ್ದಂ ॥ ಕಂ ॥ ಆ ದಣ್ಡನಾಥತಿಳಕಂ ರೋದನ್ನಳಮಂ ಯಶಸ್ಸುವಾಸಾಗ-
18 ರಮಾಚ್ಛಾದಿಸೆ ಪಾರ್ಶ್ವಜಿನೇಶ್ವರಪಾದಾರ್ಚ್ಚನೆ ಮಾಡಿ ಭೂಮಿದಾನಂಗೆ-
19 ಯ್ದಂ॥ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೩೬ನೆಯ ನನ್ದನಸಂ-
20 ವತ್ಸರದ ಪುಸ್ಯ ಸುದ್ಧ ೧೨ ಆದಿವಾರದನ್ದಿನುತ್ತರಾಯಣಸಂಕ್ರಮ-
21 ಣಪರ್ವ್ವನಿಮಿತ್ತಂ ಶ್ರೀಮತ್ತ್ರಿಭು[ವನ*]ಮಲ್ಲದೇವರ್ಗ್ಗೆ ಬಿನ್ನಪಂಗೆಯ್ದು ಕನ್ನ-
22 ಪುರಿಯಲು ತ್ರಿಭೋಗಾಭ್ಯನ್ತರ ಸಹಿತ ಬಿಜ್ಜಿಸೆಟ್ಟಿ ಮಾಡಿಸಿದ ಶ್ರೀ
23 [1] ಪಾರ್ಶ್ವನಾಥದೇವರ್ಗ್ಗೆ ಬಿಟ್ಟ ಕರಿಯನೆಲ ಮಾಣಿಕೇಶ್ವರದ ಕೋಲ ಮತ್ತ-
24 ರು ೨೪ ತೋಂಟ ೧ ನಿವೇಶನ ೨ ಗಾಣ ೧ ◎ ಈ ದೇವರ ಕೆಯ್ಮನೆಯಂ ಕಾ-
25 ದ ಮಹಾಪುರುಷನೋ ಸದುಗಂಗೆಯ ತಡಿಯೊಳ್ಗೋದಾನ ಕೋಟಿಯಿಂ ಕೊ-
26 ಟ್ಟ ಪೊರೆಯಂ ಕಿಡಿಸಿದಾತನವನಳಿದಾತಂ ॥ ಚತುರಂಗುಳಚಾರಣ—
27 [ಸು]ದ್ಧಿ ತಮಗೆ ಸಮನಿಸಿದುದೆನಿಪ ತಪದುನ್ನತಿಯಿಂ ಶ್ರುತದಿಂ ಭೂಮ-
28 ಣ್ಡಳವಿಶ್ರುತರೆನಿಸಿದರರ್ತ್ತಿ ಕೊಣ್ಡಕೊಣ್ಡಾಚಾರ್ಯ್ಯರು ॥ ವಚನ ॥
29 ಆ ಕೊಣ್ಡಕುನ್ದಾನ್ವಯದ ಶ್ರೀ ಮೂಲಸಂಘದ ದೇಸಿಗಣದ ಪುಸ್ತಕಗಚ್ಛ-
30 ದ ಪಿರಿಯ ಸಮುದಾಯದಾಚಾರ್ಯ್ಯವರ್ಯ್ಯರು ॥ ವಿಮಳಶ್ರೌತಂ ಕೈ-
31 ವಲ್ಯಮೆಂಬ ಸಂಕಲ್ಪಮಿನಿತೆನೆರ್ಗ್ಗಿಹಿಯಂ ವಿಶ್ವಮನಹುವ ಮಹಿಮೆಯಿಂ
32 ವರ್ದ್ಧಮಾನಜಿನಪತಿಗೆ ವರ್ದ್ಧಮಾನಮುನೀ[ಂ*]ದ್ರ ॥ ಆ ಮುನೀಂದ್ರಪಾದಾರಾಧ-
33 ಕಂ ॥ ಅರವಿನ್ದಸ್ಮೇರವಾಸ್ಯಂ ತಿಳಿದೆ ಹೃದಯಸಂಶುದ್ಧಿಯಿಂ ಮಾನಸಂ ಶಾನ್ತ-
34 ರಸಾಧೀನಂ ಸಮಾಧಾನಮನಹುಡೆ ತಪಸ್ತಪ್ತಮುತ್ತಪ್ತಕಾರ್ತ್ತಸ್ವರಶಾಖಾ-
35 ಲೀಳೆಯಿಂ ಪಾಳಿಸೆ ತನು ನಯನಂ ಕಾಪ್ಪುರಂ ಮಾಡೆ ಕಾರುಣ್ಯರಸಶ್ರೌತಂಗ-
36 ಳಂ ಲೋಕಮನೆಱಗಿಸಿದಂ ಬಾಳಚನ್ದ್ರ ಬ್ರತೀಂದ್ರಂ ॥ ಪ್ರಚುರಕಲಾನ್ವಿತರಕುಟಿ-
37 ಳಚಂಚಳಸ್ಪರ್ದ್ಧಪಕ್ಷವ್ರಿತ್ತದ್ವೋರ್ಷಾಪಚಯಪ್ರಕಾಶರೆನೆ ಬಾಳಚನ್ದ್ರ-
38 ದೇವಪ್ರಭಾವಮೇನಚ್ಚರಿಯೋ ॥ ಆ ಮುನಿಪಸನಾತನದೊಳಾಸಾಮುಖಮಂ ಬಳ-
39 ಸೆ ನಿಜತಪೋವಿಭವಸಮುದ್ದಾಮಯಶಂ ಪೆಸರ್ವಡೆದಂ ಕಾಮಾಂತಕನರ್ಹ-
40 ಣನ್ದಿಬೆಟ್ಟದದೇವಂ ॥ ಮಾಗಿಯ ದರ್ಪ್ಪಮಂ ಕಿಡಿ[2]ಸಿ ಬೇಸಗೆಯಂ ಬೆದಱಿಟ್ಟ ಮೀಱು
41 ಮೇಘಾಗಮಮಂ ತ್ರಿಕಾಳನಿಯಮಸ್ಥಿತಿಯಿಂ ಪರಮಾತ್ಮಯೋಗದೊಳ್
42 ಯೋಗಿಗಳನ್ನರಾರೆನಿಸಿ ಬೆಟ್ಟದದೇವರ ಮಾಳ್ಕೆಯಿಂ ತಪಶ್ರೀಗಧಿನಾಥ-
43 ನಾಗಿ ಜಿನಶಾಸನದೀಪಕನಾದೊಡೊಪ್ಪುಗುಂ॥ ಗುಣಗಳೆನೆ ಮದ—
44 ನಗಜಕೇಸರಿಯೆನಿಸಿರ್ದ್ದರ್ಹಣನ್ದಿ ಬೆಟ್ಟದದೇವರ್ಚ್ಚರಿತಾರ್ತ್ಥಂ ಸಮ್ಯಕ್ತ್ವದ
45 ಪರಿಣತಿಯಿಂ ಬಿಜ್ಜಣಂ ಜನಸ್ತುತನಾದಂ॥ ಈ ಭುವನಂ ಪೊಗಳೆ ವಿನೆಯಾ-
46 ಭರಣಂ ಬಿಜ್ಜಣಂ ಸುಶೀಳಬ್ರತಕೇಳೀಭವನನಾದನಾಹಾರಾಭಯಭೈಶ-

[1] Here the letters ಶಾಪಿ were first written and then struck off.
[2] The letter ಡಿ is written below the line.

47 ಜ್ಯಶಾಸ್ತ್ರದಾನವಿನೋದಂ॥ ಪಡೆದ ಧನಂ ಪರಾರ್ತ್ಥದೆಡೆಗಾದದು
48 ಪಾತ್ರದೊಳನ್ನದಾನಮಂ ಕುಡುವೆಡೆಗಾದುದೀ ಸಕಳಭವ್ಯಸಮೂಹ-
49 ವಿಪದ್ವಿಕಾಳಮಂ ಕಿಡಿಪೆಡೆಗಾದುದು ಜಿನಾಯತನಕ್ಕೆ ಜಿನೇಂ-
50 ದ್ರಪೂಜೆಗೆಂದಡೆ ಕೃತಕೃತ್ಯನಂ ಪೊಗಳದಿರ್ಪ್ಪದೆ ಬಿಜ್ಜನನೀ ಜಗಜ್ಜ-
51 ನಂ॥ . . ಕುಲಮಂ ಪವಿತ್ರ . . . . . . . ಜಿನಮಂದಿರಮಂ ಮಾ-
52 . . . . . . . . . . . . . . ಪರಮಾ[ರ್ತ್ಥ][1]

## No. 110

*(B. K. No. 183 of 1933-34)*

NIḌŌNI, BIJAPUR TALUK, BIJAPUR DISTRICT

*Slab set up near the house of the hereditary Pāṭīl*

### Vikramāditya VI—A.D. 1115

This inscription which refers itself to the reign of **Tribhuvanamalladēva**, ruling from the capital **Jayantīpura** is dated the **Chālukya-Vikrama year 40, Manmatha, Pushya śu. 6, Vaḍḍavāra, Uttarāyaṇa-saṁkramaṇa** corresponding probably to **A.D. 1115, December 24**. The week-day was **Friday** though the *Saṁkramana* fell on Saturday.

It records the construction of the **Vishṇu** temple at **Niḍuvaṇi**, by **Mēṇḍeya Barma** and registers a gift of land made for the worship and offerings to god **Kēśavadēva** (of the temple). The gift was made in the presence of the *Mahājanas* of the place, *Daṇḍanāyaka* **Lakshmarasa**, the *Mahāpradhāna* and *Pergaḍe* of **Tardavāḍi**, and others. *Yuvarāja* **Mallikārjuna** is stated to be governing **Tardavāḍi-nāḍu**.

### Text

1 ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾನ್ತಭುವನಂ ವಪುಃ । ಯಸ್ಮಾದಿದಂ ಜಗದಜಾಯತ ಯತ್ರ ತಿಷ್ಠ-
2 ತ್ಯನ್ತೇ ಸಮಸ್ತಮಿದಮಸ್ತಮುಪೈತಿ ಯತ್ರ। ತಸ್ಮೈ ನಮಃ ಸದಸದಾದಿವಿಕಲ್ಪಶೂನ್ಯಚೈತನ್ಯಮಾತ್ರವಪುಷೇ ಪುರುಷೋತ್ತಮಾಯ ॥೧॥
3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿ-
4 ಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕ-
5 ತಾರಂ ಸಲುತ್ತ ರಾಜಧಾನಿ ಜಯನ್ತೀಪುರದ ನೆಲೆವೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ತತ್ಪಾದಪದ್ಮೋಪಜೀವಿ।
6 ಸಮಸ್ತಭುವನವಿಖ್ಯಾತಂ ಚಾಳುಕ್ಯಾನ್ವಯಪ್ರಸೂತಂ ನಿರ್ದ್ದಳಿತವೈರಿಸಂಘಾತಂ। ಪರಿಜನಪಾರಿಜಾತಂ। ರಿಪುರಾಯಕೋವರಬಂಗಾಳಂ।
7 ಬಪ್ಪನಂಕಕಾಱಂ ಕೊಮರಂಕಭೀಮಂ। ನಯನಾಭಿರಾಮಂ। ರಿಪುಕುಮಾರವೇಶ್ಯಾಭುಜಂಗ (!) ನಯ್ಯನಸಿಂಗಂ। ಶರಣಾಗತವಜ್ರಪಂಜರಂ। ಕುಮಾ-

---

[1] A few more lines are built in.

8 ರದಿಕ್ಕುಂಜರಂ। ವೀರವಿದ್ಯಾಧರಂ । ಸಕಳಕಳಾಧರಂ। ಪದ್ಮನಾಳಗಿರಿವಜ್ರದಣ್ಡಂ । ವೀಸಳರಾಯ ಕುವರಜವದಣ್ಡಂ । ಮಹಾಲಕ್ಷ್ಮೀದೇವೀಲ–

9 ಬ್ಧವರಪ್ರಸಾದಂ। ತ್ಯಾಗವಿನೋದಂ। ಮೂಱುರಾಯಕೊವರಕ್ರಿಶ್ಸೆಲ್ಲಂ। ಸಾಹಸಮಲ್ಲಂ। **ಶ್ರೀ ಮತ್ತ್ರಿಭುವನಮಲ್ಲ ಪಟ್ಟಮ–**

10 **ಹಾದೇವಿಯರಣುಗಂ।** ಸಾಹಸೋತ್ತುಂಗಂ। ನಾಮಾದಿಸಮಸ್ತಪ್ರಸಸ್ತಿಸಹಿತಂ **ಶ್ರೀಮದ್ಯುವ– ರಾಜಂ ಮಲ್ಲಿಕಾರ್ಜುನದೇವರು**

11 **ತರ್ದ್ದವಾಡಿನಾಡಂ** ದುಷ್ಟನಿಗ್ರಹಶಿಷ್ಟಪ್ರತಿಪಾಳನಜನಪದಪೋಷಣಪ್ರಜಾಭರಣದಿಂದಾಳುತ್ತಮಿರೆ । ಸುಬುದ್ಧಿನಿರ್ದ್ದಳ್ಳ©

12 ಕಡುಚೋದ್ಯಮಿದಖಿಳೋರ್ವ್ವಿಗೆ ತೊಡವಿದು ಭೂಲಕ್ಷ್ಮಿಗೆಂದು ಬಣ್ನಿಸೆ ಪಲರುಂ **ನಿಡುವಣಿಯೊಳನ್ತು** ಮಾಳ್ಕುವೆ:ೞಂ ಕಡುಚೆಲ್ವನೆನಿಪ್ಪ

13 **ವಿಷ್ಣುಗೃಹಮಂ ಬಮ್ಮರ್ಗಂ ॥** ಪಡೆದಪೆವೆಂದು ನೆತ್ತಿಯ ಬೆಮರು ಮಿಡಿಯಿಂದಿಳಿವನ್ನು ದುಕ್ಕದಲು ದುಡಿಯುತವಿಪ್ರ್ಪರಲ್ಲದೆ ಜನಂಬಡೆವ–

14 ಲ್ಲಗೆ ಧರ್ಮ್ಮದಲ್ಲಗೇಂ ।ನಿಡುವರೆ ಪೊಂನನೊಕ್ಕಲಿಗರಮ್ಮ ಬರಾಪ್ಪನೆ ವಿಷ್ಣುಗೇಹಮಂ **ನಿಡುವಣಿ ಯಲ್ಲಿ ಮಾಡಿಸಿದ ಮೇಣ್ಣಿಯ ಬಮ್ಮಣನನ್ತಿರೋರ್ವ್ವರುಂ॥**

15 ಗಿಡುಗಡಿದುತ್ತುರ್ ಬಿತ್ತಿ ಫಲಮಂ ಪಡೆದುಣ್ಣದೆ ಲಾಬರೋೞಬಿ[ಂ] ಮಡಗಿ ಬಳಿಕ್ಕೆ ಗಾವಣಿಗೆ ಗಂಟಿಗೆ ಚೊಪ್ಪರವಿಟ್ಟು ಕೊಳ್ಪನಿಗ್ಗಡಿ ನ್ರಿಪಙ್ಗತ್ತ ಕೆತ್ತು

16 ಬಱದಾಗಿ ಬೆಗಳ್ಕೊಗದಿಂದವಿಪ್ರ್ಪ ಬೆಳ್ಗುಡಿಯರನೇಕೆ ಪೋಲಿಸುವೆ ಬಮ್ಮಣನೊಳು ಹಿತಧರ್ಮ್ಮ ಕಾರ್ಯ್ಯನೊಳ್॥ ತಾನುಣ್ಣದೆ ಪೆಱಗ್ಗಿರ್–

17 ಕ್ಕದೆ ಪೇನಿಯು ಪೆರ್ವ್ವಡುಕೆಯೆನಿಸಿ ಮಡಗದೆ [ಧ]ನಮಂ ಮಾನವರತ್ನಂ ಬಮ್ಮಣನಾನಂದದೆ ವಿಷ್ಣುಭವನಮಂ ಮಾಡಿ–

18 ಸಿದಂ॥ ಎಂಬ ಪೊಗೞ್ತೆಗಳುಂಬವಾಗಿ ಮೇಣ್ಣಿಯ ಬಮ್ಮಣಂ ಮಾಡಿಸಿದ ಧರ್ಮ್ಮಕ್ಕನುಕೂಳ– ರಾಗಿ ಯಮನಿಯ–

19 ಮಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನಜಪಸಮಾಧಿಶೀಲಸಂಪನ್ನರಪ್ಪ ಶ್ರೀಮದಗ್ರಹಾರಂ ನಿಡುವ–

20 ಣಿಯೂರೊಡೆಯಪ್ರಮುಖಮಹಾಜನಂಗಳುಂ ಶ್ರೀಮನ್ಮಹಾಪ್ರಧಾನಂ ತರ್ದ್ದವಾಡಿನಾಡ ಪೆರ್ಗ್ಗಡೆ ದ–

21 ಣ್ಡನಾಯಕಂ ಲಕ್ಷ್ಮರಸನುಮಿರ್ದ್ದು ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪ನೆಯ ಮನ್ಮಥ ಸಂವತ್ಸರದ ಪುಷ್ಯ ಸು ೭ ವಡ್ಡವಾರದಂ–

22 ದುತ್ತರಾಯಣಸಂಕ್ರಮಣಪರ್ವ್ವನಿಮಿತ್ತಂ ಶ್ರೀ ಕೇಶವದೇವರಂಗಭೋಗಕ್ಕಂ ನಿವೇದ್ಯಕ್ಕಂ ನನ್ದಾದೀವಿಗೆಗಂ ಚೈತ್ರಪವಿತ್ರಕ್ಕಂ

23 ಗೊರವಿಯ ಕೆಱೆಯ ಬಟ್ಟೆಯಿಂ ಪಡುವಲು ಹಂಟಿಗೆವಟ್ಟೆಯಿಂ ಮೂಡಲು ಮಾಣಿಕೇಶ್ವರದ ಕೋಲಲು ಸರ್ವ್ವನಮಸ್ಯಮಾಗಿ ಬಿಟ್ಟ

24 ಪೊಣಿಯ ಮತ್ತರು ಮೂವತ್ತು ಗಾಣವೊಂದು ತೋಂಟವೊಂದು ಈ ಧರ್ಮ್ಮವನರಸುಗಳುಂ ಮಹಾಜನಂಗಳುಂ ಪ್ರತಿಪಾ–

25 ಲಿಸುವರು॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾ ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ॥ ತನ್ನಿತ್ತು–

26 ದು ಪೆಱರಿತ್ತುದದೆನ್ನದೆ ಪಾಳಿಸಿದೊಡರಸುಗಳ್ಗೆ ಹವರನಾಲ್ಬುಂ ನಿಚ್ಚೆಯುಕ್ಕುಮಳಿದಂದನ್ನಯುಮುಂನ್ನುಂ–

27 ನ್ನವೆನಲಘೋಗತಿಗಿಳಗುಂ॥ ಬಹುಭಿರ್ವ್ವಸುಧಾ ದತ್ತಾ ರಾಜಭಿಃ ಸಗರಾದಿಭಿಃ ಯಸ್ಯ ಯಸ್ಯ ಯದಾ

28 ಭೂಮಿಸ್ತಸ್ಯ ತಸ್ಯ ತದಾ ಫಲಂ॥ ಕೆಡೆದೊಡೆದ ದೇವಭವನಂ ಕಿಡದನ್ತಿರೆ ಮಾಡಿದಂಗೆ ನಾಲ್ಮಡಿ ಪುಣ್ಯಂ ಕಿಡಿಸಲು

29 ಸಮರ್ತ್ಥನಪ್ಪಂ ಕಿಡಿಸದೆ ಕಾದಂದು ಧರ್ಮ್ಮವಿರ್ಮ್ಮಡಿ ದಿಟದಿಂ॥

## No. 111

(*B. K. No. 60 of 1932-33*)

HATTĪMATTŪR, HAVERI TALUK, DHARWAR DISTRICT.

*Slab standing on the east bank of the honda.*

### Vikramāditya VI— . D. 1115

This inscription referring itself to the reign of **Tribhuvanamalladēva,** is dated in **Chālukya-Vikrama year 40, Manmatha, Uttarāyaṇa-saṁkrānti, Sunday.** In the year cited, the *Uttarāyaṇa-saṁkrānti* occurred on December 25, A. D. 1115, which was a Saturday and not Sunday. The intended date probably was **A.D. 1115, December 26, Sunday**.

It states that when *Mahāpradhāna* **Śrīpati-Daṇḍanāyaka** was governing **Puligeṟe Three-hundred** and **Beḷvala Three-hundred**, the *Mahājanas* of the *agrahāra* town **Partiyamattavura** (modern Hattīmattūr, the find spot of the record) made a gift of the income derived from various taxes, for effecting repairs to the tank **Dēvimgeṟe.** It also records similar gifts of money and land made to the same tank by many others. Mention is made of the two brothers of **Śrīpati-Daṇḍanāyaka** *viz.*, **Īśvara-Daṇḍēśvara** and **Sāvidēva** and of *Daṇḍanāyaka* **Antimayya** and *Mahāmātya* **Bāhubali.** The last two are stated to be the subordinates of **Śrīpati**.

### Text

1 ⊚ ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ॥

2 ⊚ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ಪರ-

3 ಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯ-

4 ರಾಜ್ಯಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ । ತತ್ಪಾದಪದ್ಮೋಪಜೀವಿ

5 ⊚ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಚಣ್ಡದಣ್ಡನಾಯಕಂ

6 ವಿದ್ವಜ್ಜನಾಭೀಷ್ಟಫಳಪ್ರದಾಯಕ ನಾಮಾದಿಸಮಸ್ತಪ್ರಶ(ಂ)ಸ್ತಿಸಹಿತಂ ಶ್ರೀಮನ್ಮಹಾಪ್ರ-

7 ಧಾನಂ ಶ್ರೀಪತಿದಂಡನಾಯಕರು ಪುಲಿಗೆಱೆಮೂನೂಱುಮಂ ಬೆಳ್ವಲಮೂನೂಱುಮಂ ಸು-

8 ಖ ಸಂಕಥಾವಿನೋದದಿನಾಳುತ್ತಮಿರೆ॥ ವ್ರಿತ್ತ॥ ಪಿರಿಯಂ ಶ್ರೀಪತಿದಂಡನಾಥನಧಿಕಾರಶ್ರೀಯ ಪೆಂಪಿಂ-

9 ನ್ದವೀಶ್ವರದಂಡೇಶ್ವರನುಂ ನರೇಶ್ವರನ ರಾಜ್ಯಶ್ರೀಗೆ ವಿಕ್ರಮಚಕ್ರವರ್ತ್ತಿಯ ಚಮೂ-

10 ನಾಥರ್ಗ್ಗೆ ದಿಗ್ನಾಥನೆನ್ನಿರೆ ದಂಡಾಧಿಪ ಸಾವಿದೇವನನಿವರ್ದ್ದೇವಾಂಶವೇಕೋದರರ್॥ ಜಯಲಕ್ಷ್ಮೀ ಪತಿ ಕುನ್ತಳೇ-

11 ಶ್ವರನ[ರೇಂದ್ರಂ] ಮೆಚ್ಚೆ ಸರ್ವ್ವಾಧಿಕಾರಿಯಲೆ ಶ್ರೀಪತಿದಂಡನಾಯಕನೆ ರಾಜಾಧ್ಯಕ್ಷಮುಂ ತಾನೆ ಚಕ್ರಿ-

12 ಯ ಸಪ್ತಾರ್ದ್ಧಮಹೀತಳಕ್ಕಮಱಿಯೋ ದ್ರವ್ಯಾಧಿಕಾರಕ್ಕ ಮುದ್ರೆಯ ಮುದ್ರ್ಯಾಂಗುಳಿಕಂ ಜಗ-

13 ಕ್ಕವೆನಲಾವಂ ಶ್ರೀಗನಂ ಪೋಲ್ವಪಂ ॥ ತತ್ಪಾದಪದ್ಮೋಪಜೀವಿ ಸಮಸ್ತಪ್ರಶಸ್ತಿಸಹಿತಂ ಶ್ರೀಮದ್ದಣ್ಡ-

14 ನಾಯಕನ[ನ್ತಿ]ಮಯ್ಯಂಗಳ್ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿನಾಳುತ್ತಿರೆ॥ ಅಜವಂ ಶ್ರೀಪತಿ ದಂಡನಾ-

15 ಯಕನ ತೇಜೋಮೂರ್ತ್ತಿ ತಾನೆಯ್ದೆ ಕಣ್ಡಿಱದಂನ್ತಿಪ್ಪನನನ್ತನಭ್ಯುದಯಲಕ್ಷ್ಮೀಕಾಮಿನೀಕಾನ್ತನೇ ತಱೊ-

16 ಳಂ ತಾನೆ ಪೆಸನ್ತ ದುಷ್ಟಹಯಶಿಕ್ಷಾರೂಢರೇವನ್ತನಾನ್ತಿಱವಂಗುನ್ತೆ ಕೃತಾನ್ತನಿನ್ತೆನಿಸಿದಂ ದಂಡೇಶನನಾ-

17 ಥಿಪ||ವೃತ್ತ|| ಪತಿಗರ್ತ್ತಂಬಡೆದೀಯಲುಂ ಪ್ರಜೆಯನನ್ತುಂ ಕಾಯಲುಂ [ಗಂ]ಡಗರ್ವ್ವಿತವಲ್ಲಂ ತವೆ ತೇಯಲುಂ ಪ-

18 ಟು* ಮಹಾಮಹಾತ್ಮಂ ಬುಧಸ್ತುತ್ಯನಿಂದಮರಭೂಜಂ ಸೌರ್ಯ್ಯಬೀಜಂ ಪ್ರಸನ್ನತರಂ

19 ಸಾಹಸಮೂರ್ತ್ತಿ **ಬಾಹುಬಲಿ** ರಾಜ್ಯಶ್ರೀಗಧಿಷ್ಠಾಯಕಂ ||ಸಾರವಿದು ಜನದ ಮನಕೆ ವಿಚಾರಿಸು-

20 ವಗೆ ಸಾರವಸ್ತುವಿಂ **ಮುತ್ತವುರಂ** ಧಾರಿಣಿಯ ಕೊರಲ ಮಣಿಮಯಹಾರದ ಮಾಣಿಕ್ಯಮಪ್ಪೊ ಲಗ್ರಹಾರ-

21 ಮಿದೆನಗುಂ || ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜಪಸಮಾಧಿ ಶೀಳಸಂಪನ್ನ-

22 ರಪ್ಪ ಶ್ರೀಮದಗ್ರಹಾರಂ **ಪೆರ್ತ್ತಿಯಮುತ್ತವುರ**ದೂರೊಡೆಯಪ್ರಮುಖಮಹಾಜನವಿನ್ನೂರ್ವ್ವರುಂ ಸರ್ವ್ವವೆಳಸ-

23 ವಿಷ್ಠಾಣದೊಳಿರ್ದ್ದು ಶ್ರೀ**ಮಚ್ಚಾಳುಕ್ಯವಿಕ್ರಮ**[ವ*]ಷ[ರ್ಷ]ದ ೪೦ನೆಯ ಮನ್ಮಥಸಂವತ್ಸರ **ದುತ್ತ**ರಾಯಣ(ಣ)ಸಂಕ್ರಾನ್ತಿ ವ್ಯ-

24 **ತೀಪಾತಮಾದಿತ್ಯವಾರದಂದು** ಪೊರಮುನ್ತಣ ದೇವಿಂಗೆಱೆಗೆ ಪಡಿಸಲಿಸಲು ಬಿಟ್ಟ ಧರ್ಮ್ಮಮೆನ್ತೆ-[೦]ದಡೆ ಅಡಕೆಯ

25 ಭಂಡಕೆ ಪೊಂಗೆ ಹಾಗ ಎಲೆಗೆ ಪೊಂಗದ್ದಮುಂ ಬೇಳೆ ಎಲೆಯ ಹೇಱುಂಗೆರಡುಂ ವೀಸ ಅಲ್ಲವರಿಸಿನ ವುದ್ದಿಗೆ ಪೊಂಗೆ

26 ಹಾಗ ಪೊಡೆಯರು ಪೋಱಗುಯ್ದು ಮಾಱುವ ಭಂಡಕ್ಕದ್ದಾದಾನ ಪೋಱಗಣಿಂ ತಂದು ಮಾಱುವ ಭಂಡ-

27 ಕೆ ಪೊಂಗೆ ಬೇಳೆ ಕೆಱೆಯ ತೋಂಟಮಱುವಣದಿಂ ಕೆಱೆಗೆ ತಿಱುವ ಗದ್ಯಾಣಂ ಪನ್ನೆರಡು ಕರುಗಳತಿಗೆ ಮಾ-

28 ಲಗಾಱಿ ನಾವಿದನಕ್ಕಸಾಲಿ ಬಡಗಿಯಿನ್ತಿನಿಬರುಂ ಪ್ರತ್ಯೇಕಂ ತಿಱುವ ಗದ್ಯಾಣವೆರಡು ಪಣಂ ಮೂಱ[ರ]

29 ಲೆಕ್ಕದಿಂ ತಿಱುವ ಗದ್ಯಾಣಂ ಪದಿಮೂಱು ಪಣವೆಂಟು ಕೆಱೆಗಯ್ತ ಧರ್ಮ್ಮಸೆಟ್ಟಿಯರಸಿಯಕೆಱೆಯ ಪ-

30 ಡುವಣ ಮೆಯ್ಯ ಬಿಟ್ಟರೆ ಮತ್ತರ್ ಪನ್ನೆರಡು ದವಸಕ್ಕೆ ಮೂಲಸಾವಿಯಾ[1]ಯುಂ ಪೊಂಗೆ ಹಾಗ ಶ್ರೀ ಮತ್ಪಡವಳ ಮಾಚಿ[ಮ]-

31 ಯ್ಯಂ ಕೆಱೆಗೆ ಬಿಟ್ಟಕ್ಕಸಾಲಿಯಾಯಂ ಪೊಂಗೆ ಹಾಗ ಅನ್ತು ದವಸಾಯಂ ಪೊಂಗದ್ದ ||ವೃತ್ತ|| ಸಭೆಯೊಳ್ ತಾನಿ-

32 ರೆ ತೇಜದೊಳ್ಪುದುಗುಡಂ ದೇವಂಗೆ ಆಸ್ಥಾನವಲ್ಲಭನಿನ್ನೂರ್ವ್ವರ ಚಕ್ರವುದ್ಧತರಗಂಡಂ ವಿಪ್ರ ಮಾರ್ತ್ತಂಡನುಗ್ರಧ-

33 ಟಂ ಸಾಹಸಿಕಂ ಚತುಸ್ಸಮಯಪಾದಂ ಮಾಚಿರಾಜಂ ಮಹಾಪ್ರಭುವಿತ್ತಂ ಕೆಱೆಗಕ್ಕಸಾಲದ ನಿಬನ್ಧಂ ಪೊಂ-

34 ಗೆ ಹಾಗಾಯಮ || ಸ್ವಸ್ತಿ ಶ್ರೀಮತ್ಪೆ[ಜ್ಜುರ್ಂ]ಕದ ದಂಡನಾಯಕ ಲೋಕರಸರು ದೇವಿಂಗೆಱೆಗೆ ಬಿಟ್ಟ ಧರ್ಮ್ಮಮೆನ್ತೆಂದ-

35 ಡೆ ಯಿಪ್ಪತ್ತು ಮಳವೆಗೊಂದು ಮಳವೆಯ ಸುಂಕ ಯೆರಡು ಲಕ್ಕಡಕೆ[2]ಯ ಸುಂಕಮಂ ಬಿಟ್ಟರು ಮತ್ತಂ ಶ್ರೀಮದ್ದಂಡ-

36 ನಾಯಕ ಪದ್ಮರಾಹ್ನಳದ ಮೈಲರಸರುಂ ದೇವಿಂಗೆಱೆಗೆ ಬಿಟ್ಟ ಧರ್ಮ್ಮಮೆನ್ತೆಂದಡೆ ಯಿಪ್ಪತ್ತು ಮಳವೆಗೊಂದು ಮಳವೆ-

---

[1] The letter ಯಾ is written below the line in smaller character.

[2] The letter ಕೆ is written above the line in smaller character.

37 ಯ ಸುಂಕಮುಮಂ ಯೆರಡು ಲಕ್ಕಡಕೆಯ ಸುಂಕಮುಮಂ ಬಿಟ್ಟ ॥ಕ॥ ಈ ಕೆಱೆಯಂ ಪೆರ್ಬ್ಬುಱಂಕದ
ಲೋಕರಸಂ ನೋಡಿ

38 ಮೆಚ್ಚಿ ತೀರ್ತ್ಥಸ್ಥಾನಂ ಲೋಕದೊಳಿದೆಂದು ಸುಜನಾಳೋಕಂ ಕೆಱೆಗಿತ್ತನೆಲ್ತೆ ಪೆರ್ಬ್ಬುಱಂಕದೊಳ ॥
ಕರವೊಸೆದು ವಡ್ಡರಾವುಳ-

39 ದರಸಂ ಮೈಳರಸದಂಡನಾಯಕನುಂ ಲೋಕರಸಂ ಬರಸಿದ ಪಡಿಯಂ ಬರಸಿತ್ತಂ ತನ್ನ ಸುಂಕಮಂ
ಸಾತನದೊಳ್ ॥

40 ಇವರ ಪಡಿ ಕೇಣಿಕಾಱರ್ನ್ನವದಿಂ ಸುಂಕಮನೆ ಕೆಱೆಗೆ ಸಲಿಸಿಯೆ ಪಡೆದರ್ತ್ತವಿಲಿಲ್ಲದುದ್ಘ
ಕೀರ್ತ್ತಿ ಯುನವಯ-

41 ವದಿಂ ಬರ್ಮ್ಮದೇವ ಕಲಿದೇವಣನುಂ ॥ ಮುಂಕೊಂಡು ವಡ್ಡಾರಾವುಳ ಸುಂಕಮನೀ ಕೆಱೆಗೆ ನಡಸಿ
ಪೆರ್ಗ್ಗಡೆ ಜನ್ನಂ ಸುಂಕದಧಿಕಾ-

42 ರಲಕ್ಷ್ಮಿಯಿನಂಬರಿಸಿಯೆ ಮೇಲೆ ಮತ್ತೆ ಸಫಳಿತನಾದಂ ॥ ಮತ್ತಂ ದೇವಿಂಗೆಱೆಗೆ ನಾಲ್ಕುಂ ಕೇರಿಯ
ಪ್ರಭುಗಳ್ ಗ-

43 ವುಂಡಸ್ವಾಮಿ ಕಾಳಿಮಯ್ಯನುಂ ಫೈಶಾನರ ಸೋವಿಮಯ್ಯನುಂ ನಾಯಕರ ಸಿಂಗಿಮಯ್ಯನುಂ ವರಗೇ-

44 ರಿಯ ಸಿರಿಯಯ್ಯನುವಿನ್ತಿವರು ಮುಖ್ಯವಾಗಿ ಇನ್ನೂರ್ಬ್ಬರುಮಿರ್ದ್ದು ಮೂಲಗಾಱಗೆಯ್ಯುಂ ತೆಂಕಲೆ
ಡೆವ್ವೇ-

45 ಲದೊಳಗೆ ಬಿಟ್ಟ ಎರೆಮತ್ತರಿರ್ಪ್ಪತ್ತು ವಾವಿನಕೆಱೆಯ ಕೆಳ[ಗೆ] ಬಿಟ್ಟ ಮಕ್ಕಿಮತ್ತರ್ ಪನ್ನೆರಡು
ಮತ್ತಂ ಕೆಱೆಗೆ ಕೊನೆ-

46 ಕಾಱರ ಗುಡಿಗೆ ಪಣ ಸುಲಿಹಕಾಱರುಳಿಗೆ ಹಾಗ ಕೊಯ್ಯಾಲಿಗಳೇಣಿಗಳ ಬೊಜಂಗರ ಕತ್ತಿಗೆಗದ್ದ
ಕುಱುಂಬರ

47 . . . . . . . . . . . . . . . . . . . . . .
ನಾಲ್ಕುಗಾಣ . . . . . . . . ರ್ಪ್ಪಡೆ-

48 ಣ್ಣೆ ದಾಸಿ ದಾಟಿಗಳ ಕೆಯ್ಗಂ ಗರ್ದ್ದಗಂ ಪಣವಾಱು ಬಳಿಯರ ಕೆಯ್ಗೆ ತಿಱುವ ಪಣವಾಱು ಸರವಿಯ
ಕೆಯ್ಗೆ

49 ಪಣವಾಱು ವೋರಿಯರ ಕೆಯ್ಗೆ ಪಣಂ ಮೂಱು ಕೆಱೆಯತ್ತಿಂಗೆ ಗರುಡನಕಂಭದಿಂ ಮೂಡಲ್ ಮನೆ
ವೊನ್ದು

50 [ಈ] ಕೆಱೆ ದೇವಿಂಗೆಱೆ ಮತ್ತೀಕೆಱೆಗೀ ಶಿವನದಾಶಿ ಬಿಡಲಱುವಣವುಂ ಈ ಕೆಱೆಗುದ್ಧವವಾಯ್ತಿಂನ್ನೀ
ಕೆಱೆಗಿನ್ನಿತ್ತವರ್ಗ್ಗವಕ್ಷಯಪುಣ್ಯಂ

51 ಕೆಱೆಗೆಯ್ಯಂ ತೆರೆಗೆಯ್ಗೆದಂದು ಕೆಱೆಯಂ ಕೊರ್ಕ್ಕೆಂದು ಪೇಳ್ವಂಗವೀ ಕೆಱೆಗೆಯ್ಯೊಳ್ ತೆಱೆಗೊಳ್ವನೆಂಬ
ಬಗೆಯಂ ತಂದಗವಾಮ್ನಾಯದಿಂ ಕೆ-

52 ಱೆಗಾಯಂ ನಡೆವನ್ನುಬಂ ನಡೆಯಲಿನ್ನಾನೀಗುನೆಂಬಂಗವೀ ಕೆಱೆಯಂ ಕಂಡಡೆ ಕಾಯ್ದವಂಗ ನರಕಂ
ಚಂದ್ರಾರ್ಕ್ಕತಾರಂಬರಂ ॥

53 ಅಭಿವೃದ್ಧೀಶ್ವರರಾಗಿ ಜೀವಿಸುಗೆ ನಮ್ಮೀ ಗ್ರಾಮದಿನ್ನೂರ್ವ್ವರುಂ ಪ್ರಭುಃವುಂ ಕ್ಷೀರಸಮುದ್ರದನ್ತೆ
ಕೆಱೆಯುಂ ತೀ-

54 ವಿಕ್ಕೆ ಚಾಳುಕ್ಯವಲ್ಲಭನುಂ ಚೋಳನನಿಕ್ಕಿ ಚೋಳ್ನೆಲನ್ನಂ ಪಾಳಿಕ್ಕೆ ದೀರ್ಗ್ಘಾಯುವಕ್ಕ
ಭಿವಾಂಛಾಫಳಮಕ್ಕೆ ಬಾ-

55 ಹುಬಲಿಗಾಚಂದ್ರಾರ್ಕ್ಕತಾರಂಬರ ॥ ಸ್ವದತ್ತಂ ಪರದ(ಂ)ತ್ತ[ಂ] ವಾ ಯೋ ಹರೇತಿ ಪಸು
ನ್ಧರಾಃ ಷಷ್ಟಿವರ್ಷಸ-

56 ಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ಹೆರ್ಗ್ಗಡೆಯದ ಚಾಮಣಂ ಬರೆದಂ ಮಂಗಳ ೧

## No. 112

CHAUDADĀMPUR, RĀṆEBENNŪR TALUK, DHARWAR DISTRICT

*Slab set up in the Muktēśvara temple*

### Vikramāditya VI—A. D. 1115

This inscription, the latter part of which is lost, refers itself to the reign of **Tribhuvanamalladēva** (evidently Vikramāditya VI). The date is not preserved, but on the ground that *Mahāpradhāna* **Gōvindarasa**, a subordinate of Vikramāditya VI is stated to be ruling over Banavāse Twelve-thousand, Dr. Fleet who has reviewed this record in his *Dynasties of the Kan. Dists.* (p. 581) assigned it to about 1115 A. D. It gives the genealogy of **Gutta** chiefs, down to **Mallidēva** and of the chiefs of the **Jaṭāchōḷa** lineage for three generations as follows: —

Jomma
|
Dāsa=Chandabbarasi
|
Attirāja — Chanda

### Text

1 ◎ ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯನಗರಾರಂಭಮೂಲಸ್ತಂಭಾಯ
ಸಂಭವೇ॥ ತ್ರಿಣಾನಿ ಕೋಟಿವರ್ಷಾಣ್ ಮ್ರಿಣ್ಮಯಂ

2 ದಶಕೋಟಿಃ ದಾರೇಷ್ವಶತಂ ಕೋಟಿ ಶಹಸ್ರಕೋ[ಟ್ಯಾಂ] ಸಿಳಾಮಯಂ॥

3 ೦ ಸ್ವಸ್ತಿ ಸಮಸ್ತಭುವನಾಶ್ರಯ ೦ ಶ್ರೀಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇ[ಶ್ವರ ಪರಮ-
ಭಟ್ಟಾರಂ] ಶತ್ಯಾಶ್ರಯಕುಳತಿಳಕಂ

4 ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ
ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾ-

5 ರಂಬರಂ ಸಲುತ್ತಮಿರೆ ॥ಕನ್ದ॥ ಪಡ ವಲು ಪಡುವಣವಾರಿಧಿ ಗಡಿ ಮೂಡಲು ಮೂಡಣಬ್ಧಿ ಗಡಿ
ಬಡಗಲು ಹಿಮಂ ಗಡಿ ತೆಂಕ ಸೇ-

6 ತುವರೆಗಂ ಗಡಿಯಾಗಿರೆ ವಿಕ್ರಮಾಂಕನಾಳ್ವಂ ದರೆಯ॥ ಜಳನಿಧಿಪರಿವ್ರಿತಧಾತ್ರೀತಳಮೆಲ್ಲಂ ತನ್ನ
ಹಸ್ತತಳಮೆನೆ ಪೆಂಪಂ ತಳೆದೀ ಚಾಳುಕ್ಯಾನ್ವಯ-

7 ಕುಳತಿಳಕ ವಿಕ್ರಮಾಂಕನಾಳ್ವಂ ಧರೆಯ ॥ವ॥ ಆ ಪರಮೇಶ್ವರನ ಶ್ರೀಪಾದಪದ್ಮೋಪಜೀವಿ
ಶಮಧಿಗತಪಂಚಮಹಾಶಬ್ದ ಮಹಾಸಾಮನ್ತಾಧಿಪತಿ ಮಹಾ-

8 (ಮಹಾ)ಪ್ರಚಣ್ಡದಂಡನಾಯಕ ವೈರಿಗಿರಿವಜ್ರನಾಯಕ ಸುಭಟಸೇನಾನಾಥಸಿಖಾಮಣಿ ಸರಣಾಗತ
ರಕ್ಷಾಮಣಿ ಶ್ರೀಮನ್ಮಹಾಪ್ರಧಾನಂ ಗೋವಿನ್ದರಸರು

9 ಬನವಾಸೆ ಪನ್ನಿಚ್ಛಾಸಿರಮುಮಂ ಸುಖದಿನಾಳುತ್ತಮಿರೆ॥ ಉಜಿದವರಂ ಕೊಂದು ಸಲೆ ತನಗೆಜಗಿ
ದರಂ ಕಾದು ದಕ್ಷಿಣಾಪಥಮೆಲ್ಲಂ ನೆಱೆ ಬೆಸಕೆಯ್ವಂತಾಗಿರೆ ಮೆಱೆದಂ ಶ್ರೀ-

10 ಕೀರ್ತಿಲಕ್ಷ್ಮಿಯಂ ಗೋವಿಂದ ॥◎॥ ಸ್ವಸ್ತಿ ಸಮಸ್ತಭುವನಜನವಿನ್ಯಸ್ತಮಸ್ತಕಸಂಸ್ತೂಯಮಾನ
ಚಾರುಚರಣಾರವಿಂದ ವೈರಿಬಳವಿಳಯಗೋವಿಂದ। ಸುಜ್ಜೇನೀಮಹಾಕಾಳೆ-

11 ದೇವತಾಲಬ್ಧವರಪ್ರಸಾದ ಸಮಸ್ತವಿದ್ಯಾವಿನೋದ। ಪಾಟಳೀಪುರವರಾಧೀಶ್ವರ। ಕೀರ್ತ್ಯಾಂಗ
ನಾದೀಶ್ವರ। ವಟವ್ರಿಕ್ಷಧ್ವಜ। ಧೈರ್ಯ್ಯಗರುಡಧ್ವಜ। ಸೋಮ-

12 ವಂಶಲಲಾಟಲೋಚನ। ಮ್ರಿಗರಾಜಲಾಂಛನ। ಗುತ್ತರಭೀಮಂ। ಚಲದಂಕರಾಮ। ಅರಿಕುಮರ
ಮಕುಟಘಟ್ಟಿತಚರಣ। ಗುತ್ತರಾಭರ-

13 ಣ। ರಿಪುಬಳತಿಮಿರಮಾರ್ತ್ತಂಡ। ವೈರಿಕುಳಕಾಳದಂಡ। ಹಯವತ್ಸರಾಜ। ರೂಪಮನೋಜ।
ಭೃತ್ಯಚಿಂತಾಮಣಿ। ಸುಭಟಚೂಡಾಮಣಿ। ವಂದಿಜನಕಲ್ಪವೃಕ್ಷ।

14 ಶರಣಾಗತರಕ್ಷ। **ಚಂದ್ರಗುಪ್ತಮಹಾರಾಜಾಧಿರಾಜಕುಳಸಂಪೂರ್ಣ್ಣ**। ನನ್ನಿಯಲುಕರ್ಣ್ಣ।
ಮನುಮಾರ್ಗ್ಗದಾನಿ। ಸನುಮಾನದಾನಿ। ಶೌಚಾಂಜನೇಯ[1] ಸಂಪನ್ನ। ನುಡಿದುಮ-

15 ಕ್ಕೆನ್ನ। ಅಯ್ಯನ ಚಕ್ರ ಭೂಚಕ್ರಶಕ್ರ **ವಿಕ್ರಮಾದಿತ್ಯವಂಶೋದ್ಭವರಪ್ಪ ಶ್ರೀಮತ್ಗುತ್ತಾನ್ವ**
**ಯರ** ಮಹಿಮೆಯಂ ಪೇಳ್ವತೆ॥೧॥ ಕನ್ದಂ॥೧೧

16 ಅಲ್ಲಿಗೆ ಮನ್ನೆಯ ಲಕ್ಷ್ಮೀವಲ್ಲಭರೆನಿಸಿದ್ದ ಗುತ್ತಭೂಪಾನ್ವಯದೊಳ್ ಬಲ್ಲಿದನಜಯನಪ್ರತಿಮಲ್ಲಂ
**ಮಾಗುತ್ತ** ಭೂಪನೆಂಬಂ ನೆಗಳ್ದ॥ ಅಂತಾ

17 ನೃಪತಿಗೆ ಸುತ ವಿಕ್ರಾಂತದನಂ ರಾಜವಂಶಚೂಡಾಮಣಿ ಮಾಟಾಂತರಿಗಂತಕ ವಂದಿಗೆ ಚಿಂತಾಮಣಿ
**ಗುತ್ತ**ಭೂಪನಂಗಜರೂಪ॥ ವೃತ್ತ॥ ತಂದೆಯ ತಂ-

18 ದೆಯಿಂದಮೆಮಗಾಳುವ ಮಹೀತಳಮಜ್ಜಪಜ್ಜರಿಂ ಬಂದುದೆ ಸಾಲುಗುಮೆಂದವಿರದೆ ವಿಕ್ರಮದಿಂದಿದಿರಾಂತ
ಭೂಪರ ಕೊಂದು ಧರಿತ್ರಿಯಂ ಪಡೆದನರ್ತ್ಥಿಗೆ ದೇಪ್ಪದನಿತ್ತು

19 ಕೀರ್ತ್ತಿಯಂ ಮಂದಿರಮಪ್ಪಿನಂ ಪಡೆದ ಗುತ್ತನೃಪಾಳನಿದೇಂ ಕೃತಾರ್ತ್ಥನೋ॥ಕಂದ॥ ಗುತ್ತಾನ್ವಯ
ವಂಶಾಗ್ರಣಿ ಗುತ್ತಾನ್ವಯರಾಜಭವನಮಂಗಳಕಳಶಂ ಗುತ್ತಾನ್ವಯ-

20 ಚೂಡಾಮಣಿ ಗುತ್ತಾನ್ವಯತಿಳಕನೆನಿಸಿದಂ ಗುತ್ತನೃಪಾಳ॥ ಆತನ ತನೆಯಂ ಜಗದೊಳು ನೀತಿಪರಂ
ರಿಪುಕರೀಂದ್ರಕಣ್ಠೀರವ ಭೂತಳಕ್ಷತ್ರಿಯರೊಳಜಾ-

21 ತವಯಂ ಮಲ್ಲಿದೇವನದಟರದೇವ ॥ವೃತ್ತ॥ ಎಣಿಸಲು ಭೂಪಾಳರೀಗಳು ಪಲಬರುಮೊಳರಾ
ಭೂಪವರ್ಗ್ಗಂಗಳಿಪ್ಪೀಗಣಿದಂ ಪೂರ್ವ್ವಾದ್ರಿಯೊಳು ಚಂದ್ರಮನೆಸೆ-

22 ವ ಸರೋಮಧ್ಯದೊಳು ಪಂಕಜಂ ಕೇವಣದೊಳು ಮಾಣಿಕ್ಯವಿಪ್ಪಂತಿರೆ ಭುವನಜನಕ್ಕಾಶ್ರಯಂ
ರಾಜಚೂಡಾಮಣಿಯಿಪ್ಪಂ ಮಲ್ಲಿದೇವಂ ತ್ರಿಭುವನತಿಳ-

23 ಕಂ ರಾಜಮಾನ್ಯಾಥಭೂಪಂ ॥ಕ॥ ಭಂಡಣದೊಳು ರಿಪುಭೂಪರ ತಂಡಮನವಯಾವದೆ ಗೆಲ್ದು
ಜಯಲಕ್ಷ್ಮಿಯ ದೋರ್ದ್ದಂಡದೊಳಿಸಿದ ಬೀರದ ಗಂಡಂ ಕೇವಳ-

24 ಮೆ ನಮ್ಮ ಮಲ್ಲನೃಪಾಳ॥ ನುಡಿಯದಡೆ ನುಡಿಯದಿಕ್ಕೆಮ ಕುಡುವೆಂ ನಿಮಗೆಂದು ನುಡಿದನಪ್ಪಡೆ
ಮೃಡನೊಳು ಪಡೆದ ಬರ

25 [ವೇರು]ಗಿರಿಯೊಳು ಕಡೆದಕ್ಕರ ಮಲ್ಲಭೂಪನು ನುಡಿದಿಂ ಬಳಿಕಂ॥ ವೃ॥ ಪದಪಿಂ ಮಲ್ಲನೃಪಾಳ
ನಿನ್ನ ರಣಕೇಳೀಲೀಳೆಯಂ ಪಕ್ಷಪಾತದಿನಾಂ ಪೇಳದೊಡೇನೊ ಪೋದ ಪ-

26 ಲವು ಸಂಗ್ರಾಮದೊಳು ಸತ್ತನೇಱಿದ ಪುಲ್ಗಟ್ಟಿದ ಕಯ್ದುವಂ ಬಿಸು[ಟ] ನೀರ ಪೊಕ್ಕ ನಿಗ್ರ
ನ್ಥಮೋಡಿದ ನಿಂದಾಡಿದ ಕಯ್ಗಳಂ ಮುಗಿವರಾತಿವ್ರಾತ-

27 [ವೇಂ] ಪೇಳವೆ॥ಕ॥ ಅಜಿಯ ಧರಣಿಯನೇಱಿದ ವಾಜಿಯ ಖುರದಿಂದಮುತ್ತುರ್ದ್ದ ರಿಪುಶಿರಮೆಂಟ
ಬೀಜಮನೆ ಬಿತ್ತಿ ಬೆಳವಂ ರಾಜಿ-

28 ತವಿಖ್ಯಾತಕೀರ್ತಿಯಂ ಮಲ್ಲನೃಪ ॥ವೃತ್ತ॥ ದೆಸೆ [ಪೊ]ಸಮುಣ್ಣದಿಂದೆಸೆವ ನೆತ್ತರ ಸುಟ್ಟುರೆಯಿಂ
ನಭಸ್ಥಳಂ ಪಸರಿಸಿ ಬಿಟ್ಟ ವೀರಭಟರಟ್ಟೆಗಳಿಂ ಹಯ-

29 ಖಂಡ ಖಂಡಿಯಿಂ ಕುಸುರಿವೋರಾಗೆ ವೈರಿಬಲ[ಮಂ] ತಱಿದೊಟ್ಟಿದಗುರ್ವ್ವು ತಾನಗುರ್ವ್ವಿಸಿದುದು
ಮಲ್ಲಿದೇವ ನಿಜಿದಾಹವರಂಗದ ವೈರಿಸೇನೆ-

30 ಯ॥ ವಚನ॥ ಆ ಗುತ್ತಾನ್ವಯರ ಹೃದಯಾ[ವಳಂ]ಬಿಗಳಪ್ಪ ಜಟಾಚೋಳಾನ್ವಯರ ಮ=ಡಿಸಿದ
ಶಿವಾಲಯದ ಮುಕ್ತಿತೀರ್ತ್ಥದ ವ್ಯಾವರ್ಣ್ಣನ॥ಕ॥

31 ಹರನ ಜಟಾಗ್ರದಿ ನೆಲಸಿದ ಸುರನದಿಗಂ ವೇದಶೈಳಶಿಖರಾಗ್ರದಿಂ ಧರೆಗಿಳಿದ ತುಂಗಭದ್ರಾವರನದಿಗಂ
ದೊರೆಯೆ ಜಗದ ನದಮುಂ ನದಿಯು

32 ೧ ವೃ॥ ಸುದತೀಕುಂಕುಮಪಂಕಿತಾರುಣ[ಜಳಂ] ದಾನೇಭದಾನಾಜಳಂ ನಿದಧಕು
ಪಂಕಜಪುಷ್ಪರಂಜಿತಜಳಂ ವೇದಾಚಳೇಂ ಪ್ರೋಪಕಣ್ಠದಿನೆತ್ತಂ ಸುರಿ-

---

[1] Some phrase before ಸಂಪನ್ನ seems to have been omitted.

33 [ವಿಂ]ದುಕಾನ್ತದಜಳಂ [ಹೇರಮ್ವಿರ್]ನಂದೋಹದಿಂ ಪದಿದೆತ್ತಂ ಲಹರೀದಿಶಾಬಧಿರಿತಂ ಶ್ರೀ
ತುಂಗಭದ್ರಾಜಳಂ ॥ ಕ ॥ ಗಂಗೆ ಸಮಾನ ದಕ್ಷಿಣಗಂಗಾ ನ-
34 ದಿ ಮಿಂದ ಮರ್ತ್ಯರಘಸಂಕುಳಮಂ ಪಿಂಗಿಸುವ ಗಂಗೆಯಂತಿರೆ ಪಿಂಗಿಪಳಘಕುಳಮ ನಮ್ಮ
ದಕ್ಷಿಣಗಂಗೆ ॥ಪಾವನವೆನಿಸಿದ ಗಂಗಾದೇವಿಗೆ
35 ಸರಿ ದೊರೆ ಸಮಾನ ದಕ್ಷಿಣಗಂಗಾದೇವಿಯನೆ ತುಂಗಭದ್ರಾದೇವಿಯನಿನ್ನೀಜಯೆ ಪೊಗಳಲಾವಂ
ನೆಱವಂ ॥ ವೃತ್ತ ॥ ಸುರಸ್ಯೆ-
36 ಳೇಂದ್ರಕ ಹಿಮ್ಯಾಚಳದ ಮಹಿಮೆಗಂ ತಾರಶ್ಯೆಳಕ್ಕೆ ನೋಡಲು ದೊರೆವೆತ್ತೀ ವೇದಶೈಳೇಂದ್ರ
ದಲಮರನದೀಸಂನಿಧಂ ಮೇಘಬೃಂದೋತ್ಕರದಿಂದಂ
37 ಭತ್ರ[ದಿರ್ದ್ವಣ್ಣಾ]ದ ಬಹಳತೆಯಿಂಬಂದದಿಂ ಬಂದು ತಾನೀ ನರರಂ ಪಾಪಕ್ಷಯಮಾಡುವ ವಿಮಳ
ಜಳಂ ತುಂಗಭದ್ರಾ ಪ್ರವಾಹ ॥ ಗದ್ಯ ॥ ಅದೆಂತೆಂ-
38 ದೊಡೈರಾವತಗಂಡಮಂಡಳಭಿತ್ತಿಯಂತೆ ದಾನೋಚಿತಸ್ಥಾನಮುಂ । ಹರಜಟಾಗ್ರದಂತೆ ನದೀವಿರಾ
ಜಿತಮುಂ । ಪಾತಾಳಲೋಕದಂತೆ ನಾಗ-
39 ಸಹಿತಮುಂ । ಸುರೇಂದ್ರನಯನದಂತೆ ರಂಭಾಯುತಮುಂ । ದೇವಲೋಕದಂತೆ ಸುಮನೋ
ಭಿರಾಮಮುಂ । ಸಂಗೀತಕದಂತೆ ತಾಳ-
40 ಸಹಿತಮುಂ । ಬ್ರಹ್ಮಸಭೆಯಂತೆ ದ್ವಿಜವಿರಾಜಿತಮುಂ । ಅಂತಲ್ಲಿ ಮೂಱುಂ ಕಾಲಮುಂ । ಆಱುಂ
ರಿತುಗಳುಂ । ಸರ್ವ್ವರ್ತ್ತುಕಮಪ್ಪ ಮು-
41 ಕ್ತಿತೀರ್ತ್ಥದ ಸ್ಥಾನದೊಳು ಸುಕಸಾರಿಕಾರವಮಣಮುಂ । ಮತ್ತಮಧುಕರಗೀತಾರಮಣಮುಂ ।
ಪಗಲು ಪಗಲೆಂಬ ಕೋಕಿಳಸ್ವನಾರಣಮುಂ ।
42 ಸಮೀರುಮಂದಾರಪಾ[ರ್ಜಾ]ತಾದಿ ಸಕಳವೃಕ್ಷರಾಜಿತಮುಂ । ಸಾಮವೇದಸಪ್ತಸ್ವರಮಂತ್ರಾಕ್ಷರಂ
ಗಳ[ಂ] ಹೋಮಂಗೆಯ್ವ ದ್ವಿಜೋತ್ತಮರ
43 ಹೋಮಧೂಮಸ್ತೋಮಮುಂ । ದೇವತಾತರ್ಪ್ಪಣ ರಿಷಿತರ್ಪ್ಪಣ ದಿಕ್ತರ್ಪ್ಪಣ ಗಾಯತ್ರೀ ಶ-
ಡಕ್ಷರ ಜಪಂಗಳಂ ಮಾರ್ಪ್ಪ ಸದ್ಬ್ರಾಹ್ಮಣರಿಂ । ವ-
44 ಜ್ರಾಸನ ಪದ್ಮಾಸನ ಸ್ವಸ್ತಿಕಾಸನಂಗಳಿಂ । ನಾದಭೇದ । ಬಿಂದುಭೇದ । ಸಕ್ತಿಭೇದ । ಆತ್ಮಭೇದ
ಮೆಂಬ ನಾಲ್ಕುಂ ತೆಱದ (!) ಯೋಗಲಕ್ಷಣಲಕ್ಷಿತರಪ್ಪ ಯೋಗಿಗ-
45 ಳಿಂ । ಮುಕ್ತಿಮಾರ್ಗ್ಗಮೆ ಮೂರ್ತ್ತಿಗೊಂಡಿರ್ದ್ದ ಮುಕ್ತಿತೀರ್ತ್ಥದ ಬಹುವಿಧ ಲಿಂಗಾಶ್ರಯಂಗಳೊ
ಪ್ಪುಗುಮಲ್ಲ ॥ ಕಂದ ॥ ಅಜಸಭೆಯೆಂತನ್ತೆ
46 ಸದಾ ದ್ವಿಜಪರಿವೃತಮಿಂದ್ರನಂತೆ ಸುಮನಾಶ್ರಯಮಾಶ್ರಿಜನಗಜದಂತೆ ದಾನಬೃಂಹಮಯಮಾ
**ಮುಕ್ತಿತೀರ್ತ್ಥ**ಮದು ಕೇವಳಮೇ ॥
47 ವೃತ್ತ ॥ ಕುಸುಮಿತ ಮಲ್ಲಿಕಾದಿನವಪಾಟಳಸಂಕುಳದಿಂ ಕೊನರ್ತ್ತ ತಳ್ತಸದಳಮಾಗಿ ಬಂದ
ಪೊಸಮಾವುಗಳಿಂ ಮೊರೆವನ್ನದಾಳಿಯಿಂ ಮಸ-
48 ಗಿ ತ[ಗುಳ್ದು] ಬಗ್ಗಿಪ ಪಿಕಾಳಿಗಳಿಂ ನಯದಿಂದ ತೆಂಕಣಂದೆಸಹಿಲರಿಂದಮೀ ಮುಕ್ತಿತೀರ್ತ್ಥವ
ದೊಪ್ಪುಗುಮೆಂತು ನೋರ್ಪ್ಪಡ ॥ ಪಂಸಾವತಾರ
49 ಕಂದ ॥ ◎ ಶ್ರೀಗೆ ನೆಲೆ ದಾನಧರ್ಮ್ಮಕಾಗರವೆನೆ ನೆಗಳ್ದನೀಜಟಾನ್ವಯ ಕುಲದೊಳು ಭೋಗ
ಪುರಂದರ ನಯವಿದ ನಾಗರಪರಿವೃತ-
50 ಧರಿತ್ರಿಯೊಳ್ **ಜೋಂಮನೃಪಂ** ॥ ಕಂದ ॥ ಆತಂಗೆ ಪುಟ್ಟಿದ ವಿಖ್ಯಾತಿವರಂ ರಾಜಸುತರೊಳ
ಮಳಚರಿತ್ರ ಭೂತಳದಲರ್ತ್ಥಿಗಮ-
51 ರಕುಜಾತಂ ಕೇವಳಮೆ **ದಾಸ** ವೀರವಿಳಾಸಂ ॥ ಸರಸೀರುಹವದನೆ ಚಂದಬ್ಬರಸಿಗೆ ಗುಣನಿಳಯ
ನೆನಿಪ ದಾಸನೃಪಂಗಂ ಪರಹಿತಚರಿತಂ
52 ಪುಟ್ಟಿದ ಹರಚರಣಪಯೋಜಭೃಂಗನ**ತ್ತಿನೃಪಾಳಂ** ॥ ಆತನ ತಮ್ಮ ॥ **ಚಂದಂಗವಬ್ಬ**ನಾಥನ
ಕಂದಂಗ ಸೇತುಗಟ್ಟಿ ಲಂಕೇಸ್ವರನ ಕೊಂದಂಗ ಸುರನದಿ-
53 ಯಂ ತಂದಂಗ ದೊರೆಯೆ ಮನುಜರವನೀತಳದೊಳು ॥ ವಚನ ॥ ಮಾಪಂ ಮಹಾಮಂಡಳೇಸ್ವರಂ ।
ವೀರರಾರಾಶಿಮದನಮಹೇಸ್ವರ । ಮೂಱುರಾಯ-

54 ಮಂಡಳಿಕಮದಗಜೇಂದ್ರಕಣ್ಠೀರವಂ ರಾಯನ ಮಹಿಮೆಯಂ ಪೇೞ್ವೊಡೆ ॥ ಕಂದ ॥ ಸುರವಟ್ಟೀವೃದು
ಸುರತರು ಪರಳಾಗಿಯೆ ಕುಡುತಮಿ–

55 [ರ್ಕ್ಕ] ಚಿಂತಾಮಣಿಯಾ ಮರನುಂ ಕಲ್ಲುಂ ಪ್ರಿಯದಿಂ ಕರದೇನಿತ್ತಪುವೆ ರಾಯನಂತಿರೆ
ಜಗದೊಳು ॥ ವೃತ್ತ ॥ ಪರಮಾರ್ತ್ಥಕ್ಕಿಷ್ಟದೈವಂ ಶ–

56 ನಗಖಿಳಜಗತ್ಸ್ವಾಮಿ ನಂದಾದಿದೇವ ಗಿರಿಜಾರ್ದ್ಧಾಂಗಾನುಸಂಗಂ ಶಿವನೆ ಗಡ ಕುಲಸ್ವಾಮಿ
ಕಾರುಣ್ಯದಿಂದ ಪೊರೆದಾರ್ದ್ದಂ ವಿಕ್ರಮಾಂಕಾನ್ವಯ–

57 ಕುಳತಿಳಕಂ ಮಲ್ಲಭೂಪಂ ಗಡಿಂತೀ ಧರೆಯೊಳು ಧನ್ಯಂ ಜಟಾಚೋಳಕೋಳವಾಳಯುಸೊ
ರಾಜನೀಯತ್ತಿರಾಜಂ ॥ ಕಂದ ॥ ಧರೆಯೊಳಗೆ ವಾರಣಾ–

58 ಸಿಯು ದೊರೆಯೆನಿಸುವ ಪುಣ್ಯನದಿಯ ತೀರ[ದೆ]ಸಮದಂ ಹರನಿಳಯಮನವಕುಳನಂಹರನಿಳಯ
ಮನತ್ತ್ರಿಯಿಂದ ಪತ್ತಿನ್ನಿಪಾಳಂ ॥ ಉತ್ತಮರ

59 ಕೆಲದೊಳಂ ಭೂಪೋತ್ತಮರಾಸ್ಥಾನರಂಗದೊಳ ಸುಜನಕವಿಕೋತ್ತಮರ ಸಭೆಯೊಳವತ್ಯುತ್ತಮನೀ
ಯತ್ತಿರಾಜನಂ ಪೊಗಳದರಾರೋ ॥ ವೃತ್ತ ॥ ಧರೆಯೊ–

60 ಳನೇಕರಿಲ್ಲ ಸುಜನಕ್ಕಲಿಕಾಲದೊಳಂತೆ ಭದ್ರಸಿಂಧುರಘಟೆಯಿಲ್ಲದಂತೆ ಸುಜನೋತ್ತಮನಕ್ಷರಪಕ್ಷ
ಪಾತಿ ನೆಟ್ಟರ ಬೆಳಗೆಯು ಧರಾಮರರ ಕಯ್ಪಿಡಿ

61 ಸಿಷ್ಟನಿಧಾನಸಿದ್ಧರ್ಪಂ ವರಗುಣಿಯತ್ತಿರಾಜನೆಳೆಗೋರ್ವ್ವನೆ ಕಳ್ಪಕುಜಾತವಿಪ್ರರ್ಪ್ಪೋರ್ ॥ ಸ್ವಸ್ತಿ
ಶ್ರೀಮನ್ಮಹಾಸಾಮಂತ ವೀರಲಕ್ಷ್ಮೀಕಾನ್ತಂ ಜಟಾನ್ವಯ ಚೋ–

62 ಳವಂಶಾಗ್ರಣಿ ಶಿಷ್ಟಚಿಂತಾಮಣಿ ಗೋತ್ರಪವಿತ್ರ ಸಬಳತ್ರಿಣೇತ್ರ ವೀರವಿಳಾಸಂ **ಗುತ್ತರ
ಚಂದ್ರಹಾಸಂ** ಹರಚರಣಸರಸೀರುಹ(ಂ)

63 ಮಧುಕರ ವಿನೆಯರತ್ನಾಕರಂ[1]

## No. 113

*(B. K. No. 5 of 1932-33)*

AGADI, HAVERI TALUK, DHARWAR DISTRICT

*Stone near the temple of Basavaṇṇa in S. No. 240*

**Vikramāditya VI—A. D. 1116**

This inscription referring itself to the reign of **Tribhuvanamalladēva** is dated **in the Chālukya-Vikrama year 40, Manmatha, Pushya Amāvāsyā, Monday, Uttarāyaṇa-saṁkrānti, solar eclipse** The date is irregular. In the cyclic year Manmatha, the *tithi* cited corresponds to **A. D. 1116, January 16,** which was a **Sunday.** There was no eclipse on that day and the *Uttarāyaṇa-saṁkrānti* fell on Saturday, 25th December, A. D. 1115.

It gives a eulogistic account of [*Mahā*]*pasāyta* **Baṁkeyarasa** who was governing from his headquarters, **Agaṇḍe,** the divisions of **Beḷguhe Seventy, Iṭṭage Thirty,** some *kampaṇas* in **Banavāse Twelve-thousand** and some *agrahāras*. It states that his subordinate **Birudaradēva** built a temple of **Birudēśvara** at **Agaṇḍe** and granted some lands for the worship and offerings to the god. The gift-land was purchased from **Eṟaka-gāvuṇḍa** and was entrusted to **Varēśvara-Paṇḍita.** Another grant of paddy and oil to the same god is recorded. The record is very badly damaged.

---

[1] The continuation is lost.

## Text

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭಮೂಲಸ್ತಂ[ಭಾ]ಯ
ಶಂಭವೇ
2 . . . . . . ವೃತ್ತಂ . . . ವೀರಲಕ್ಷ್ಮೀ . . . . . . .
3 . . . . ವಿಕ್ರಮಾ[ದಿತ್ಯ] . . ಸಮಸ್ತಭುವನಾಶ್ರಯಂ ಶ್ರೀಪೃಥ್ವೀ
ವಲ್ಲಭ . . . . .
4 ತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ . . . . . .
5 . . . . . . . . . . . ದಣ್ಡನಾಯಕ
6 . . . . . . ಪ್ಪಸಮಸ್ತಶಾಸ್ತ್ರ . ರ್ಜ್ಜಿತಂ ಜಿತ . . . . . . ಮೂರ್ತ್ತಿ
[ವಿಶ್ವ]ಲೋಕಸ್ತುತಕೀರ್ತ್ತಿ ಸನ್ದ . . . . ಗಮಣ್ಡಳೇಶ್ವರಂ ॥
7 ಹೃತ . . . ಮಣ್ಡನಮಣಿಭವನ ಬಾಹುದಣ್ಡ . ಜಯ ಶ್ರೀ . . . . . .
. . . . .
8 . ವದನ . . . . . ಮಣಿಮುಕುಟ ಲೋಕಸಂಹಾ . . . . . . .
9 . ಸಿಯಕಮಂಗಲಂ ನೆಗಬ್ದ . . . . . ಪ್ರಬಯ . . . ತೆರೆಯೂರು ಕೋಯ
ತೂಪ್ಪಿರ್ರಿ . . . . . . . . .
10 . ಚೋಳಮಹೀ . . . . . ರಾಜಧಾನಿಗಳ್ ತರತರದಿಂ . . . . . .
11 . . . . . . . ಕಾನನಾ . . . . . . . . . . . ಶ್ರೀ.
12 . . . . ತಳೆದಂ . . . ಮಹಿ . . . . . . . . .
ದಿಯು ॥ ಸ್ವಸ್ತಿ ಸಮ . . . . . ಮಹಾಶಬ್ದ . . . . .
13 . . . . . . . . ಹೇಶ್ವರಂ . . . . . . . . ರಾಮಂ
. . . . ತ್ರಿಣೇತ್ರಂ
14 . . . . . . . ವಿಪುಲಂ ಧರ್ಮ್ಮಸಂಗ . . . . . ಕಲಿ . . . .
ವಿಕ್ರಮಾ . . . . . . . . ಮೃಗಮಲ್ಲಂ
15 ವೈರಿ[ಕ್ರಿ]ತ್ತೆಲ್ಲಂ ಬಿರುದರದೇವಂ ನಂಟರಭಾವಂ ತಪ್ಪೆತಪ್ಪುವಂ . . . . ಶೌರ್ಯ್ಯನರ-
16 ಸಂಕಸೊ[ರೆ]ಕಾಱಂ ಪರಬಳಸೂರೆಕಾಱಂ ತ್ರಿಭುವನಮಲ್ಲದೇವ . . . . . .
17 ವೈರಿಪುರಟ್ಟಂ ನಿಜವಿಶುದ್ಧಕೀರ್ತ್ತಿಲಲನಾ . . . . . ಶ್ರೀ ಕಾಮಿ . . .
ನೇಕವಾಕ್ಯಂ
18 ನೀತಿಚಾಣಕ್ಯನಾಶ್ರಿತಜಂಗಮಸುರತರು . . . . . . . ಸಮಸ್ತ . . . .
ಗಣ್[ಕಾ]-
19 ಮನೋಜಂ ಕಂದುಕವತ್ಸರಾಜಂ . . . . . ಲಕ್ಷ್ಮೀ . . . . ಶ್ರೀಮತು
20 . . . . ಗಣ್ಡರ ಗುಮ್ಮಾದ್ಯನೇಕನಾಮಾವಳೀಸಂ . . . . . [ಶ್ರೀಮನ್ಮಹಾ]
ಮಣ್ಡಳೇಶ್ವರಂ ತ್ರಿಭುವನ . . . ಪಸಾ-
21 [ಯ್ತ] ಬಂ[ಕೆ]ಯರಸರ್ ಬೆಳ್ಗ್ಗಹೆಯೆಪ್ಪತ್ತು . . . . . ವಿಟ್ಟಗೆಮೂವತ್ತ
. . . . . . ಯಾಗೆ ಬನವಾಸೆ ಪ-
22 ನ್ನಿಚ್ಛಾರ್ಸಿರದೊಳಗಣ ಪಲವುಂ [ಶಿ]ರದ ಕಂಪಣಂ . . . . . ಗ್ರಾಮ . . .
. . ಮಹಾಗ್ರಹಾ . . . ಯುಮನೆರ-
23 [ಡ]ರುನೂಱಱೊಳಗೆ ಸರ್ವಣೂ[ರು] ಸವಸಿ ಕುಂದುಗೋಳೆ . . . ವುಂ ಮಹಾಗ್ರ
ಹಾರಂಗಳ್ಕಂ ದುಷ್ಟನಿಗ್ರಹ[ಶಿ]ಷ್ಟ ಪ್ರತಿಪಾಳನ-
24 ದಿನಾಳುತ್ತಮಗಂಡೆಯ ಬೀಡಿನೊಳ್ ಸುಖದಿನರಸುಗೆಯ್ಯುತ್ತುಮಿರೆ। ತತ್ಪಾದಪದ್ಮೋಪಜೀವಿ
[ಸಿಕ್ಷಾಕಾರ ಧಾತ್ರಂ] ಬ . . ರ ಧರ್ಮ್ಮಪುತ್ರ .
25 . . ದ ಬಿರುದರದೇವನೇ[ದೊ]ರೆಯನ[ಂದದೆ] . . . . . . . ತಜನದೆಡ . . .
ದೇವಕಾರ್ಯ್ಯದೆಡೆಗಂ ತವಿ . . . ಡೆ ನೋಡನೆ ಕೂಡಿ [ಜ]-

26 ನವಿಂ ಪಡೆದಂ ಸಲಪ್ಪೊರ್ಗೆಳೆ ನೆಗಬ್ದ ಬಿರುಧರ . . ನೊಡೆದಾಳು . . ದೊಳುಮೆನಿಸಿ
ದರೆಗೆ . . ನಮುಂ . . . ನಯು

27 . . . . . . . . ಗಾತು ಬಿರು . . . . . . . . ಕ್ಯಾವನಿಪರ ನಾಳೆಗೆ
ಯೊಳು ತಾರಮಂದ್ರಮಧ್ಯಧ್ವನಿಯಿಂ ಕೇಳಿಸಿದನು ಥ–

28 ಯ ಗಾಯ . . . . . ಜಯ್ಯೆಂದು ಪೊಗಳೆ ಬಿರು . . . . . . . . . ಕಂ॥
ದೋರಪಸೆಟಿಯಬ್ಬೆನಗೆಯ್ದು . . . . . . . ಮನುಮಾಗ್ಗಾನ್ವಿತರಪ್ಪ

29 ದಮ್ಮಣನುಮಾ ಚಾವುಣ್ಡನುಂ ದೇಸಿಯುಂ . . . ಸ್ಸತಿಯುರ್ . . . . . . .
ತನಗಿಷ್ಟದೈವವಧಿನಾಥಂ

30 . . ಕ ಭೂಪಾಳಕಂ॥ ಗುರುಗಳ್ ಗವರೇಶ್ವರಾಯ್ಯರ್ಪ್ಪರದಂ ತಾಂ ಮಾನ್ಯಂ ಬಿರುದರದೇವನೆ
ದಲಾಗೆ

1 . . ಸುಮತಿಯೊಳ್॥ ತ್ರಿಣಯನಭಕ್ತಿಯೊಳಾ . . . ಮಾನವನುತ್ತು . . . .
ಯೆನಿಪನೆ ಸದ್ಧರ್ಮದಕಣ್

32 ಸುಜನಾಗ್ರಣಿಯೆನಿ[ಪಂ] **ಬಿರುದರದೇವಂ** ॥ ತ್ರಿದಶಾ . . . . ಸಾಸಿಮ್ಮಡಿ
ವಿಶೇಷಮನಗಂಡೆಯೊಳೊ–

33 ಪ್ಪಿರೆ ಮುದದಿಮ್ಮಾಡಿಸಿದನೊಸೆದು **ಬಿರುದರದೇವಂ**॥ ಬಿರುದರದೇವನ ಮಾ . . ಪುರುಷಾರ್ತ್ಥ
ಮೂರ್ತ್ತಿಗೊಣ್ಡು ನೆಲಸಿದುದೆಂಬಂತಿರೆ ಬಿರುದೇಶ್ವರನೆಸೆದಂ–

34 ದಂ ಬಿರುದರದೇವಂಗೆ . . . . . ತಿಯಿಂ . . . **ಬಿರುದೇಶ್ವರದೇವರ** [ಪೂಜೆಗಂ]
ನೇವೇದ್ಯಕ್ಕಂ ಖಣ್ಡಸ್ಫುಟಿತಜೀರ್ಣ್ನೋದ್ಧಾರಕ್ಕೆಂದಗೆಣ್ಡೆಯೆಜ[ಕ]ಗಾವುಂಡನ

35 ಕಯ್ಯೊಳ್ ಬಿರುದೇಶ್ವರದೇಗುಲದಿಂ ಬಡಗಣ ಸಮೀ[ಪ] . . . ಚವಿಯ ಗಡಿಂಬದಲಿಮ್ಮ
ತ್ತರು ಕೆಯ್ಯುಮಂ [ಆ]ದೇಗುಲದಿಂ ಪತ್ತಿರೆ ತೆಂಕಣಮಯ್ಯಾ–

36 ದೆ ಕೆಱೆಯಿಂದ ಮೂಡರ್ ತೆಂಕಣ [ಕ]ವಿರೆಗಲ್ಲು . . ಡಕೆಯ ತೋಂಟಮುಂ ಮ .
. . . . . . . . . . . . ಪತ್ತಿರೆ ಮೂಡಲಗಂಡೆಯ ಕೋಟೆಯ ಪಡುವಣಪಳ್ಳ[ಂ]–

37 ಬರಂ ನಿವಿಃಜ್ದ ಪರಡೋಳಗೆ . . . . . . . ಮನಾ ಪೊಲದಿಂ ಪಡುವಣ
ಹೂದೋಟಮುಮಂ ಕೆಂಗೆಱೆಯ ಮೊದಲೇರಿಯ ಕೆಳಗಿರ್ಪ್ಪತ್ತಯ್ದು ಕಮ್ಮ

38 ಗದ್ದೆಯುಮಂ ದ್ರವ್ಯಪೂರ್ವ್ವಕಂ ಹಡದು . . . . . ಬಿರುದರದೇವಂ ಮಾಱುಗೊಣ್ಡು
ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೦ನೆಯ ಮನ್ಮ–

39 **ಥಸಂವತ್ಸರದ ಪೌಷ್ಯದ[ಮಾ]ವಾಸ್ಯೆ ಸೋಮವಾರಮುತ್ತರಾಯಣಸಂಕ್ರಾನ್ತಿ ಸೂರ್ಯ್ಯ**
**ಗ್ರಹಣ ವ್ಯತೀಪಾತದಂದು** ॥ ವಾದಿಘರಟ್ಟಂ ದು–

40 [ರ್ದ್ದರ]ವಾದಿಮಹಾಪ್ರಳಯಕಾಲಭೈರವ[ರೂ]ಪಂ ವಾರಿ . . . . . ಯ ಪವನಂ
ಮೇದಿನಿಯೊಳ್ ವಾದಿದೇವಮುನಿಪಂ ನೆಗಬ್ದಂ॥ ಆ ವಾದಿದೇವನ

41 ಶಿಷ್ಯರ್॥ ಪರಮಶಿವಾಗಮಗಗನಾನ್ತರಸೂರ್ಯ್ಯಂ ಪರಮ . . . ತರ್ಣ್ಣವಚಂದ್ರಂ
ಪರಮೇಶ್ವರಚರಣಾಂಬುಜವರಭೃಂಗಂ ಶ್ರೀವರೇಶ್ವರಬ್ರತಿ–

42 ನಾಥಂ॥ ಅನ್ತೆನಿಸಿದ **ವರೇಶ್ವರಪಂಡಿತದೇವ**[ರ*] ಕಾಲಂ ಕರ್ಚ್ಚಿ ಧಾರಪೂರ್ವ್ವಕಂ ಸರ್ವ್ವ
ನಮಸ್ಯವಾಗೆ ಬಿಟ್ಟಂ॥ ಈ ಧರ್ಮ್ಮಮನಗಂಡೆಯ ಪ್ರಭು ಕಜ್ಜಂತ–

43 ರೆಜಕಗಾವುಂಡನು ವಾತನ ತಮ್ಮಂ ಸುಂಕಿಂಗೆಱೆಯ ಬಮ್ಮಗಾವುಂಡನುವಾದಿಯಾಗೆ ಕಜ್ಜಂತವಂಶ
ದಿರುವಗಂಡೆಯಱುವತೊಕ್ಕಲುವಲ್ಲಿಯೆಂಟು–

44 ಹಿಟ್ಟುಂ ದೆ[ಳ್ಗು]ಹೆಯಪ್ಪತಜ ಪ್ರಭುಗಾವುಂಡುಗಳು[ಂ] ನಾಡಮನ್ನೆಯರುಂ ಮೇರಾಳ್ಕೆಯರ
ಸುಂ ಪ್ರತಿಪಾಳಿಸುವರ್॥ ಆಗಂಡೆಯ ಬಮ್ಮಿಸೆಟ್ಟಿ ಮು–

45 ಖ್ಯವಾಗಿ ನಗರವಯ್ನೂರ್ವ್ವರುಮಗಂಡೆಯಲು ಸೊಂಟಿಗೆಯ ಧರ್ತ್ತಮುಮಂ ಬಿಟ್ಟರು ಶೆಲ್ಲಗೆರಯ್ದು
ಕೊತ್ತಕಲು ದೇವರ

46 ನಂದಾದೀವಿಗೆಗೆ ಗಾಣದಲು ಸೊಂಟಿಗೆಯೆಣ್ಣೆಯುಂ ಬಿಟ್ಟರಿನ್ತೀ ಧರ್ಮ್ಮಮನಾ[ವ*]ನೋರ್ವ್ವಂ
ಪ್ರತಿಪಾಳಿಸಿದವಂಗೆ ವಾರಣಾಸಿ ಕುರುಕ್ಷೇತ್ರವೆಂಬ ಪುಣ್ಯತೀರ್ತ್ಥ–

47 ಗಳೊಳ್ ಸಾಸಿರ ಕವಿಲೆಯುಂ ಸಾಸಿರ ಕೋಡುಂ ಕೊಳಗುಮಂ ಪಂಚರತ್ನಂಗಳಿಂದಂ ಕಟ್ಟಿಸಿ ಸಾ
[ಸಿ*]ರ್ವ್ವೇದಪಾರಗರಪ್ಪ ಬ್ರಾಹ್ಮಣರಿಗೆ ದಕ್ಷಿಣೆಗೊಟ್ಟ ಫಲಮಕ್ಕು

48 . . ಅಟಿಪಿದನಿದನೆಕ್ಕೋಟಿಯ ನಟಿಪಂ ತೀರ್ತ್ಥಂಗಳನಿತುಮನಿತುಮನೋಜಂತಳಿದಂ ಪಶುವಂ
ಪಾರ್ವ್ವರನಳಿದಂ ಮೆಯ್ಯಳಿದನಾತನಜಗುಜ-

49 ಗಿಟಿದಂ ॥ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುನ್ಧರಾ ಷಷ್ಟಿರ್ವ್ವರ್ಷಸಹಸ್ರಾಣಿ
ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ಸಾಮಾನ್ಯೋಯಂ ಧರ್ಮ್ಮಸೇತು-

50 ನೃ[ರ್*]ಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ ॥ ಸರ್ವ್ವಾನೇತಾನ್ ಭಾಗಿನಃ ಪಾರ್ತ್ಥಿ
ವೇಂದ್ರಾನ್ ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥

51 ಶ್ರೀ ಬಿರುದೇಶ್ವರದೇವರ ಕಲುವೆಸಕೆ ಅಯುಹೋಜನೊಡೆಯ . . . . .

## No. 114

*(B. K. No. 185 of 1932-33)*

GADAG, GADAG TALUK, DHARWAR DISTRICT

*Slab lying near the northern prākāra of the Vīranārāyaṇasvāmin temple.*

**Vikramāditya VI—A. D. 1116**

This inscription which refers itself to the reign of **Tribhuvanamalladēva** is dated in the **Chālukya-Vikrama year 41, Durmukhi, Pushya ba. 3, Sunday, Uttarāyaṇa-saṁkrānti** corresponding regularly to **A. D. 1116, December 24, Sunday.**

It records a grant of land made for a feeding house (*satra*) and for the worship of god **Maṇiyara-Mallikārjunadēva** by **Maṇiyara-Mahādēvayya—Nāyaka** of the *agrahāra* town **Baṭṭakere. Baṭṭakere** and the *Mahājanas* of that place are highly praised. The genealogy of **Mahādēvayya—Nāyaka** is given.

### Text

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । ತ್ರೈಲೋಕ್ಯನಗರಾರಂಭಮೂಲಸ್ತಂಭಾಯ
ಶಂಭವೇ॥

2 ನಮಸ್ತಸ್ಮೈ ವರಾಹಾಯ ಲೀಲಯಾ ಚರತೇ ಮಹೀಂ।ಖುರಾನ್ತರಗತೋ ಯಸ್ಯ ಮೇರುಃ ಖಣ
ಕಣಾಯತೇ॥

3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ
ಭಟ್ಟಾರಕಂ ಸತ್ಯಾ

4 ಶ್ರಯಕುಳತಿಳಕಂ ಚಾಳುಕ್ಯಾಭರಣಂ **ಶ್ರೀಮತ್ತ್ರಿಭುವನಮಲ್ಲದೇವರ** ವಿಜಯರಾಜ್ಯಮುತ್ತರೋ
ತ್ತರಾಭಿವೃದ್ಧಿಪ್ರ-

5 ವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣ
ಮೌನಾನುಷ್ಠಾನಪರಾ—

6 ಯಣಜಪಸಮಾಧಿಶೀಲಗುಣಸಂಪನ್ನಶ್ರುತಿಸ್ಮೃತ್ಯರ್ತ್ಥಾಗಮಕುಶಲರ್ವ್ವೇದವೇದಾನ್ತಸಿದ್ಧಾನ್ತಾಗಮ
ತರ್ಕ್ಕವಾದವ್ಯಾಕರಣಾ-

7 ದಿಸರ್ವ್ವಶಾಸ್ತ್ರಪೂರ್ಣ್ಣತಸಭಾಶೋಭಿತರ್ವ್ವಿಪ್ರಜನಪೂಜಿತಸ್ವರ್ತ್ಯಕರ್ಮ್ಮಾತಿಥಿಯಭ್ಯಾಗತದೇವತಾ
ಸಂತರ್ಪ್ಪಿತಗರ್ಗ್ಗಣಗ-

8 ಣಾಧಾರಪರ್ಪ್ಪವಿರ್ತೂರಪರ್ಪ್ಪರಮಯೋಗಿಗಳಧ್ಯಯನಾಧ್ಯಾಪನವೇದವಿದ್ಯಾಪಾರಗರ್ಸ್ಸಕಳಕಳಾಗಮ
ಕುಶಲರ್ಜ್ಞಾನಸಂ-

9 ಪೂರ್ಣ್ಣರಾಶ್ರಿತಜನಕಲ್ಪವೃಕ್ಷರ್ಸ್ಸರಣಾಗತವಜ್ರಪಂಜರರ್ಷೊತ್ರಿಜಪಕುಳಾನ್ತರ್ತಮ್ಮಜಿ ವೊಕ್ಕರಾ ವೃತಿ
ಗಳೇಕವಾಕ್ಯರ್ದ್ವಾತ್ರಿಂಶ-

10 ಸಹಸ್ರಲಲಾಟಲೋಚನರ್ಗ್ಗಂಗಾಜಳಧೌತನಿರ್ಮ್ಮಳವಸ್ತ್ರ ಪವಿತ್ರೀಕೃತೋತ್ತಮಾಂಗರಪ್ಪ ಶ್ರೀಮಂನ
ಮಸ್ಯದನಾದಿಯ

11 ವೈವಸ್ವತಮನುವಿನ ಅಸಮನ್ದನ ದತ್ತಿ ಮಹಾಗ್ರಾಮಂ ಬಟ್ಟಕೆಱೆಯ ಊರೊಡೆಯ ಪ್ರಮುಖ
ಮಹಾಜನಮಿನೂರ್ವ್ವರು ಸಮಸ್ತ

12 ಗೋಲೆ ಗೋಬ್ರಾಹ್ಮಣರ್ಮ್ಮದಲಾಗಿ ಸಬಾಲವೃದ್ಧರ್ನ್ನರದು ಧರ್ಮ್ಮಂಗಳಂ ಸ್ವಧರ್ಮ್ಮದಿಂ
ಸುರಕ್ಷಿತವಾಗಿ ರಕ್ಷಿಸುತ್ತಮಿರೆ ◎ ವೃತ್ತ ॥

13 ವನಧಿಪರೀತಭೂತಳದೊಳೊಪ್ಪುವ ಬೆಳ್ವಲದೇಶಮೆಂಬ ಕಾಮಿನಿಯ ಘನೋನ್ನತಸ್ತನಮನೋಹರ
ಹಾರಮನಾ ಬೃಹನ್ನಿ-

14 ತಂಬಿನಿಯ ಕಟೀತಟಸ್ಥಿತವಿರಾಜಿತಕಾಂಚಿಯನೆಯ್ದೆ ಪೋಲ್ತು ಚೆಲ್ವನೆ ನೆಱೆ ತಾಳ್ದಿ ಬಟ್ಟಕೆಱೆ ನೆಟ್ಟನೆ
ಕಣ್ಗೆಸೆದೊಪ್ಪಿತೋಱುಗುಂ ॥

15 ಇನ್ತೆನಿಸಿದ ಮಹಾಗ್ರಹಾರದೊಳ್ ಶ್ರೀಮನ್ಮಣಿಯರ ಮಹದೇವನಾಯಕನ ವಂಶಾವತಾರಮೆನ್ತೆ
ನ್ದಡೆ ॥ ವೃತ್ತ ॥ ◎

16 ವಾರಿಜಸಂಭವಾನ್ವಯದೊಳಗ್ಗಳಮಪ್ಪ ವಶಿಷ್ಟಗೋತ್ರನಾಚಾರಸಮನ್ವಿತಂ ಸಕಳದರ್ಮ್ಮವಿದಂ
ನಿಜಬನ್ಧುವರ್ಗ್ಗನಿಸ್ತಾ-

17 ರಕನೆನ್ದು ಕೇಳ್ ರವಿಕಮಯ್ಯನೊಲ್ದನುರಾಗದಿನ್ದ ವಿಃ ಧಾರಿಣಿ ಬಣ್ಣಿಕುಂ ಮಣಿಯರೆಂಬ ನೆಗಱ್ತೆಯ
ಪುಣ್ಯಮೂರ್ತ್ತಿಯಂ ॥

18 ಇನ್ತೆನಿಸಿದಂಗೆ ತನೆಯಂ ಕನ್ತುನಿಭಂ ನಾಚಿಮಯ್ಯನೆಂಬಂ ನಶ್ರೀಮನ್ತಂ ನ್ನೆಗೞ್ದಂ ಬುಧಜನಚಿನ್ತಾ
ಮಣಿ ಪುರುಷರತ್ನನುರ್ವ್ವೀತ-

19 ಳದೊಳ್ ॥ ಪತಿಭಕ್ತಿಯೊಳಾ ವಿಭುವಿನ ಸತಿಯೆನಿಸಿದ ಕಣ್ಣಿಕಬ್ಬೆ ದೊರೆಯೆನಿಪಳರುನ್ಧತಿಗೆ ಸುಮನೆಗೆ
ಗುಣಾಳಂ[ಕ್ರಿ]ತೆ[ನಾ]-

20 ವಿತ್ರಿಗೆ ಪತಿವ್ರತಾಗುಣದಿನ್ದಂ ॥ ಆ ದಂಪತಿಗಮಭ್ಯುದಯಮದಾದಂ ಪಲ್ಲವಿಸೆ ಪು[ತ್ರ]ದಂ ಬನ್ಧುಜನಾ
ಹ್ಲಾದಂ ದಿವ್ಯಜ್ಞಾನಿ ಮ-

21 ಹಾದೇವಂ ವಿಬುಧಮಿತ್ರನಮಳಿನಚರಿತಂ ॥ ವೃತ್ತ ॥ ಶಿವಪಾದಾಂಬುಜಭೃಂಗನುತ್ತಮಗುಣೋತ್ತುಂ
ಗಂ ಮಹಾದಾನಿ ಧರ್ಮ್ಮವಿನೋ-

22 ದಂ ಸುಜನಾಗ್ರಗಣ್ಯನುಚಿತಾಚಾರಾನ್ವಿತಂ ನೀತಿಶಾಸ್ತ್ರವಿದಂ ವ್ಯಾಪ್ತದಿಗನ್ತಕೀರ್ತ್ತಿ ನಿಜಗೋತ್ರಾಂ
ಭೋಜಚಣ್ಡಾಂಶುವೆನ್ದವನೀಶ-

23 ಕ್ರಮೊಱಲ್ದು ಕೂಡೆ ಪೊಗೞ್ಗುಂ ಶ್ರೀಮನ್ಮಹಾದೇವನಂ ॥ ಆ ವಿಭುವಿನ ಸತಿ ಗುಣದೊಳಿಳಾವನಿತೆಯ
ಸುತೆಯನುಮೆಯನ-

24 ನಸೂಯೆಯನಾ ದೇವಕಿಯಂ ಪೋಲ್ವಳೆನಲ್ ಕೇವಳಮೆ ಮುದ್ದಿಕಬ್ಬೆ ಲಲನಾರತ್ನಂ ॥ ಇನ್ತು
ನೆಗರ್ತ್ತೆಯಂ ಪಡೆದಾ ಪ-

25 ತಿವ್ರತೆಗೆ ಪತಿಯೆನಿಸಿದ ಪುಣ್ಯಭಾಜನಂ ಧರ್ಮ್ಮಚಿತ್ತನಾಗಿ ॥ ಬೆಳಬೆಳಬೆಳಗೆ ಜಗತ್ರಯದೊಳಗೆಲ್ಲಂ
ಸುಕೃತರ-

26 ತ್ನದೀಪಿಕೆಗಳನುಜ್ವಳಿಪ ಗುಣದಿಂ ಸುಪುತ್ರಃ ಕುಳದೀಪಕನೆನಿಸಿದಂ ಮಹಾದೇವಯ್ಯಂ ॥ ಇನ್ತೆಸೆದಂಗೆ ॥
ವೃ ॥ ಮೊಣಿ-

27 ಯರ ಮಲ್ಲಿಕಾರ್ಜ್ಜುನನುಮಾರಮಣೀರಮಣಂ ಮಹೇಶ್ವರಾಗ್ರಣಿಗೆ ಪರೋಪಕಾರಕರಣವ್ರ
ಸನಂಗೆ ಸಮಸ್ತ ಧರ್ಮ್ಮಭೂ-

---

1 Read ನಾ

28 ಷಣಪರಿರಂಜಿತಂಗೆ ಸುಕವಿವ್ರಜಕಲ್ಪಕುಜಂಗೆ ಬೇಳ್ಪುದಂ ಪ್ರಣಯದಿನೀಯುತಿರ್ಕ್ಕೆ ಮಹಿಮೋನ್ನತಿ [ಯಿಂ] ಮದನಾರಿ ನಿಚ್ಚಲುಂ॥

29 ⊚ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೧ನೆಯ ದುರ್ಮ್ಮುಖಿಸಂವತ್ಸರದ ಪುಷ್ಯ ಬಹುಳ ೩ ಆದಿತ್ಯವಾರಮುತ್ತ-

30 ರಾಯಣಸಂಕ್ರಮಣ ವ್ಯತೀಪಾತದಂದು ಮಣಿಯರ ಮಹಾದೇವಯ್ಯನಾಯಕಂ ಶ್ರೀಮನ್ನಟ್ಟಕೆಜೆಯಿನ್ನೂರ್ವ್ವರ್ಗ್ಗಂ ಪಾದ-

31 ಪೂಜೆಯಂ ಕೊಟ್ಟವರ ಕಯ್ಯೊಳಗೆ ಸರ್ವ್ವನಮಸ್ಯವಾಗಿ ವರದಾನಮಂ ಪಡೆದು ಬಂಟಗೆಜೆಯ. ಮೂಡಣ ಮೈಯ್ಯೊಳ್ ಸತ್ರ-

32 ಕ್ಕೆ ಚಂದ್ರಾರ್ಕ್ಕಸ್ಥಾಯಿಯಾಗೆ ಬಿಟ್ಟ ಕೆಯಿ ಮತ್ತರು ೨೦ ಮತ್ತಂ ಬಂಟಗೆಜೆಯ ಬಡ್ಡೆಯಿಂ ಮೂಡಣದೆಸೆಯೊಳ್ ಶ್ರೀ ಮಣಿಯ-

33 ರಮಲ್ಲಿಕಾರ್ಜ್ಜುನದೇವರಂಗಭೋಗಾಸ್ಪದಕ್ಕೆ ಬಿಟ್ಟ ಕರಭೂಮಿ ಮತ್ತರು ೧೩ ಮತ್ತಂ ಸೂಲದಕೆಜೆಯ ಪಡುವದೆಸೆಯೊಳ್

34 ದೇವರಂಗಭೋಗಕ್ಕೆ ಬಿಟ್ಟ ಕರಭೂಮಿ ಮತ್ತರು ೧೮ ಈ ಧರ್ಮ್ಮಮಂ ಶ್ರೀಮದಿನ್ನೂರ್ವ್ವರುಂ ತಮ್ಮ ಧರ್ಮ್ಮವಾಗಿ ಪ್ರತಿಪಾಳಿಸುವರು

35 ಇನ್ತೀ ಧರ್ಮ್ಮಮಂ ರಕ್ಷಿಸಿದವರ್ಗ್ಗೆ ಶ್ರೀಪ್ರಯಾಗೆ ವಾರಣಾಸಿ ಕುರುಕ್ಷೇತ್ರವರ್ಗ್ಯತೀರ್ತ್ಥಮೆಂಬ ಪುಣ್ಯಕ್ಷೇತ್ರಂಗಳೊಳ್ ಸೂ-

36 ರ್ಯ್ಯಗ್ರಹಣದನ್ದು ಸಾಸಿರ ಕವಿಲೆಯಂ ಸುವರ್ಣ್ನಾಳಂಕೃತಂ ಮಾಡಿ ಚತುರ್ವ್ವೇದಪಾರಗರಪ್ಪ ಸಾಸಿರ್ವ್ವಬ್ರಾಹ್ಮಣರ್ಗ್ಗೆ ಕೊಟ್ಟ ಫಲ-

37 ಮಕ್ಕು ಇನ್ತೀ ಧರ್ಮ್ಮಮನಳಿದವರು ಪ್ರಯಾಗೆ ವಾರಣಾಸಿ ಕುರುಕ್ಷೇತ್ರವರ್ಗ್ಯತೀರ್ತ್ಥಂಗಳೊಳಾ ಸಾಸಿರ ಕವಿಲೆಯುಮಂ ಚತು-

38 ರ್ವ್ವೇದಪಾರಗರಪ್ಪ ಸಾಸಿರ್ವ್ವಬ್ರಾಹ್ಮಣರುಮನಳಿದ ಮಹಾಪಾತಕನಕ್ಕು ⊚ ದಾನಂ ವಾ ಪಾಲನಂ ವೇತಿ ದಾನಾಚ್ಛ್ರೇಯೋನುಪಾಲನಂ

39 ದಾನಾತ್ಸ್ವರ್ಗ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ॥ ಸ್ವದತ್ತಾಂ ಪರದತ್ತಾಂ ವಾಯೋ ಹರೇತ ವಸುನ್ಧರಾ[ಂ] ಷಷ್ಟಿವರ್ಷಸಹಸ್ರಾ-

40 ಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ॥ ⊚ ಪಂಚಕೇಶ್ವರದೇವರ ತೋಟದ ಹತ್ತಿ[ರೆ] ಬಡಗಣ ಮಯ್ಯಲು ದೇ-

41 ವರಿಗೆ ಮತ್ತರು ೧॥ ⊚

## No. 115

*(B. K. No. 183a of 1932-33)*

GADAG, GADAG TALUK, DHARWAR DISTRICT

*Stone built into the north prākāra of the Vīranārāyaṇasvāmin temple.*

### Vikramaditya VI—A. D. 1118

This inscription dated in the **Chālukya-Vikrama era** (year omitted) **Viḷambi, [Bhā]drapada Pūrṇima, Sunday,** refers to a grant of money made to a god (name lost). The donor's name is lost. During the reign of **Vikramaditya VI**, the cyclic year **Viḷambi** coincided with **A. D. 1118**, and **Bhādrapada Pūrṇimā** fell on **August 22, Friday.**

### Text[1]

1 . . . . .
2 ಳುಕ್ಯ ವಿಕ್ರಮವರ್ಷದ[2] ನೆಯ ವಿಳಂ[ಬಿ] . . . .
3 [ದ್ರ]ಪದ . . . . ಪುಣ್ಣ್ಯಮಿ ಆದಿತ್ಯವಾರದ . . . .
4 ಕಂವಹಾಱುಕೆಯ ದಶವನ್ದ್ದಂ . . . . .
5 ನು . . . . . ದೇವರ್ಗ್ಗೆ ಕಾಲಂ ಕರ್ಚ್ಚಿ ಕೊಟ್ಟ . . . .
6 . . . . . . ಕೊಟ್ಟ ಗದ್ಯಾಣ ಅಯ್ದು . . . . .
7 [ಕ್ಕೆ] ನೊಱುವರ್ತ್ತೊಕ್ಕಲು

## No. 116

*(B.K. No. 132 of 1932-33)*

KANAVALLI, HAVERI TALUK, DHARWAR DISTRICT

*Hero-stone built into the wall of the temple of Paramēśvara*

**Vikramaditya VI—A.D. 1120**

This hero-stone dated in the [**Chālukya**]-**Vikrama year 45, Śārvari, Vaiśākha śu. 5, Sunday**, commemorates the death of **Eḍava Bamma,** who fought for his master **Eṟaka-gāvuḍa**. The details of the date correspond to **A.D.1120, April 4, Sunday, f.d.t. ·10**

### Text

1 ◎ ವಿಕ್ರಮವರಿಸದ ೪೫ನೆಯ
2 ಸಾರ್ವ್ವರಿಸಂವತ್ಸರದ [ವೈ]ಸಾಖ ಸು-
3 ದ್ಧ ೫ ಆದಿವಾರದಂದು । ಎಱಕಗಾವುಡನ ಬಂ-
4 [ಟ] ಎಡವ ಬ[೦]ಮ ಕುದುರೆಯು ಮೇಲಾಳುಮಂ
5 ಕೊನ್ದು ತನ್ನ [ಜೋ]ಳವಾಳಿಯು
6 ವಿಲದನು

## No. 117

*(B. K. No. 20 of 1933-34)*

KĀGINELLI, HIREKERUR TALUK, DHARWAR DISTRICT.

*Slab set up against the front wall of the Vīrabhadra temple.*

**Vikramāditya VI—A. D. 1121**

This long inscription belonging to the reign of **Vikramāditya VI** is dated in the **Chālukya-Vikrama year 45, Sārvari, Magha śu. 2, Monday, Uttarāyaṇa-saṁkrānti.** The date is irregular. The *tithi* cited, corresponding to **A. D. 1121 January 22,** fell on **Saturday.** The *Kumbha-saṁkramaṇa* occurred on the following Sunday.

---

1 Engraved in continuation of No. 183 and not separately numbered in the *A. R.* of that year.

2 The year has been omitted.

It registers a grant of land made for the worship of and offerings to god **Kāḷēsvara-dēva**, and for the feeding of ascetics. Gifts of land and money were also made for the dancing girls and other persons connected with services in the temple. The grants were made by the residents and the **Seventy** (*mahājanas*) when **Bamma-gāvuṇḍa** and **Chila-gāvuṇḍa** were administering **Kāgenele Twelve, Paṇḍiyūr** and **Kuppageḍe** and **Kaliyamarasa** was governing **Bāsavūr Hundred-and-forty**. **Gōvindarāja-Daṇḍadhīsa**, a servant (*baṇṭa*) of **Anantapāḷa-Daṇḍādhīsa** is stated to be the governor of **Banavāse-dēśa**.

## Text

1 ◎ ನಮ (ಃ)ಸ್ತುಂಗಶಿರಸ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭಮೂಲಸ್ತಂ
ಭಾಯ ಶಂಭವೇ ॥ ಶ್ರೀರಾಮಾರಮಣಪ್ರಿಯಂ ತ್ರಿಭು[ವ*]ನಪ್ರಸ್ತುತ್ಯನಂಭೋಜಗರ್ಭಾರಾ-

2 ಧ್ಯಂ ನಗಜಾವಿಳೋಳನಯನ ಶ್ರೀನೀಳನೀರೇಜವಿಸ್ತಾರಪ್ರಸ್ಫುರಚಾರುಚಂದ್ರಕಿರಣಂ ಕಾಳೇಶ್ವರಂ
ಭಾಕ್ತಕಾಧಾರಂ ರಕ್ಷಿಸು . . . ಮ್ಮನನಿಶಂ ಚಂದ್ರಾರ್ಕ್ಕತಾರಂಬರ ॥ ಕನಕಾದ್ರೀಂದ್ರ-

3 ದಿನಿತ್ತರೊಪ್ಪುವುದು ಜಂಬೂದ್ವೀಪವಾ ದ್ವೀಪಸಂಜನಿತಂ ನಾಡೆ ಬೆಡಂಗುವೆತ್ತ ಭರತಕ್ಷೇತ್ರಂ ತತು
ಕ್ಷೇತ್ರರಂಜನ ವ . . . ದು ಕುನ್ತಳ ವಿಶಯವನ್ತಾ ಕುನ್ತಳಾಧೀಶರೊಳು ಜ-

4 ನನಾಘಾಗ್ರಣಿ ತಾನೆ ಹೆಮ್ಮೆರ್ವಡೆದಂ ಪೆರ್ಮ್ಮಾಡಿಭೂಪಾಳಕ ॥ ಚೋಳಮದೇಭಪಂಚವದನಂ
ಬನದರ್ಪ್ಪಹರಂ ಕಳಿಂಗ. . . . . . . ಪಾಳಕುಳಾಚಳೇಂದ್ರಕುಳಿಶಂ ಜಯಸಿಂಹ
ಕುರುಂ-

5 ಗಭಂಗಶಾರ್ದ್ದೂಳನಶೇಷರಾಯಮದಭಂಜನನೆಂಬುದು **ವಿಕ್ರಮಾಂಕಭೂಪಾಳನ**ನಂಬುರಾಶಿ
ಪರಿಖಾಪರ್ಯನ್ತ ಮಹಾಮಹೀತಳ ॥ ರಾಯರ್ಘುಳಪ್ಪರಾಯಗಜಕೇಸರಿ ರಾಯ-

6 ನ್ರಿಸಿಂಹ ರಾಯರಾಧ್ಯೇಯ ವಿರೋಧಿರಾಯಮದಮರ್ದ್ದನ ರಾಯ ಲಲಾಮ ರಾಯನಾರಾಯಣ ಬಾಪ್ಪೆ
ನುತ್ತೆ ಧರೆ ಬಣ್ಣಿಸೆ ವಿಕ್ರಮಚಕ್ರಿ ಭೂತಳಶ್ರಯನನಾಕಳಂ ಪಡೆದು ಪಾಳಿಸಿದಂ ತ್ರಿಜಗ್ಯೈಕವಲ್ಲ-

7 ಭ ॥ ತತ್ಪಾದಪದ್ಮೋಪಜೀವಿ ॥ ವಿಳಂ ಮೂಳವಮಂ ಜಯಲೀಲಾವಿಭ್ರಮದ ಬೆಂಗಿಯಂ ನಿಜನಾ
ಥಂಗಾಳಾಗಿಸಿ ಭುಜಬಳದಿಂ ಪಾಳಿಸಿದ**ನನನ್ತಪಾಳದಂಡಾಧೀಶ** ॥ ಚೆಂಟಣಿಪ ರಿಪುನ್ರಿಪಾಳರ
ಗಂಟಲಬಳೆ ಬೀರಸಿರಿಗೆ ಬಳೆಯ-

8 ನೆ ಬಲ್ಪಂ ನಾಂಟಿಸಿದ**ನನನ್ತಪಾಳನ** ಬಂಟಂ **ಗೋವಿನ್ದರಾಜದಂಡಾಧೀಶ** ॥ ಬನವಾಸೆದೇಶಮೆಂಬೀ
ವನಿತೆ ಶ್ರೀವನಿತೆಯಾಗೆ ಗೋವಿಂದ [ಪೆ]ಸತ್ತ್ರನಗೊಪ್ಪಿರೆ ರಿಪುಭೂಭುಜದನುಜಹರಂ ರೂಢಿವ
ಡೆದನಾ ಗೋವಿನ್ದ ॥ ಆ ನಾಡ ಮಹಿಮೆಯಂ-

9 ಕೆಂದಡೆ ॥ ಬಳಸಿದ ನಂದನಾಳಿ ಕರವೊಪ್ಪುವ ಪುಲ್ಲಲತಾಳಿ ಕೂಡೆ ಪುಂಡಳಿಪ ಶುಕಾಳಿ ಬಗ್ಗಿಪ
ಪಿಕಾಳಿ ತಜಂ[ದಿರದು]ನ್ಮದಾಳಿ ಕಣ್ಗೊಳಿಸುವ ಗನ್ಧಶಾಳಿ ಸುಳಿದಾಡುವ ತೆಂಕಣಗಾಳಿ ದೇಸೆ
ಯಂ ತಳೆದು ನಿರಂತ-

10 ರಂ ನಿಮಿರ್ದ್ದು ರಂಜಿಸುಗುಂ **ಬನವಾಸೆದೇಶ**ದೊಳು ॥ ಜಿನುಗುವ ತುಂಬಿ ಕುಂತಳಕುಳಕ್ಕೆ
ಪಿಕಂ ನುಡಿಗಂಚೆಯಾನರಂಜನಕೆ ಶುಕಂ ವಿರಾಜಿಪಧರಕ್ಕೆಳಸುತ್ತಿರೆ ಕೊರ್ಬ್ಬಿ ತೋರ್ಪ್ಪ ಜವ್ವನವನ
ವೊಪ್ಪವಂ ತಳೆಯೆ ಶೋಭೆ ಮಿ-

11 ಗಲುರಿಳಸೋವ ಪಾಮರೀಜನದ ಸವಿಭ್ರಮಭ್ರಮಣ್ ರಂಜಿಸುಗುಂ ಬನವಾಸೆದೇಶದೊಳು ॥ ದೇಶವೊ
ಡೆದೊಪ್ಪುವೀ ಬನವಾಸೆಯೊಳಾ ವ್ಯಾಸಮುನಿಯೆ ಸನ್ನುದದೆ ತಪಶ್ಯಸುಖದಿಂದಿರ್ದ್ದೆಡೆಯಂ
ವ್ಯಾಸ-

12 ಪುರಂ ತಾನೆನಿಪ್ಪುದಾಪ್ತಾನ್ವಯದಿಂದ ॥ ಅದು ನೊಜಿನಾಲ್ವತೆನೆ ತೆಂಘೋದವಿದ ಕಂಪಣದ ಮಹಿಮೆಯಂ
ತಾಳ್ದಿ ಸಮಂತದಿಜ ಬಳಿ ಕಾಗೆನೆಲೆಯೆಂಬುದು ಹಂನೆರಡೆನಿಪ ಪಿರಿಯ ಪೆಸರಿಂದೆಸೆಗುಂ ॥ ಸಿರಿಗೆ ನೆರೆ
ಗುಣದ ನೆರೆ

13 ಭಾಸುರಕೀರ್ತ್ತಿಗೆ ನೆಲೆ ವಿವೇಕವಿಭವದ ನೆಲೆ ವಿಸ್ತರಿಪ ಜಯವಧುಗೆ ನೆಲೆಯೆನೆ ಕರವೆಸಗುಂ ಕಾಗೆ ನೆಲೆ ಧರಿತ್ರೀತಳದೊಳು ॥ ಕಾರ್ತ್ತಿಕಮಾಸದಂದಿನ ಚತುರ್ದ್ದಸಿಗುರ್ವ್ವರವುದೊಂದು ಸದ್ಮಹಾ ಮೃತ್ತಿಕೆಯಿಂತದಂ ಸವಿ-

14 ದ ಕಾಗೆ ಕರಂ ಬಿಳಿದಪ್ಪುದಾದೊಡಾ ಮೃತ್ತಿಕೆ ತಾನೆ ದಲು ಕನಕಯೋಗಸುಸಿದ್ಧವೆನುತ್ತ ಬಲ್ಲವ ರ್ಕ್ಕೀರ್ತ್ತಿಸಲಿನ್ನು ಕಾಗೆನೆಲೆಯಾದುದದಲ್ಲದೆ ದೇಸೆಗಾದುದೇ ॥ ಸರಧಿಯಿಂ ಪಳಂಚಲೆವ ಪೆರ್ಗ್ಗಜ ಚೆಲ್ವಿಡಿದಿರ್ದ್ದ ನಂದನಂ ನಿರುಪ-

15 ಮವಾಗಿ ಕರ್ತ್ತಲಿಕುಸಿಪ್ಪೆಲೆವಳ್ಳಿ ಮಡಲ್ತು ರಂಜಿಪಾ ಸುರಗಿಯ ನಾಗ ನಾಗಕುಸುಮಂಗಳ ಪುಷ್ಪಲತಾಗೃಹಂ ಸವಿಸ್ತರವೆಸೆದೊಪ್ಪೆ ಕಾಗೆನೆಲೆ ಶೋಭೆಗೆ ತಾಯಿನೆಲೆಯಾಗೆ ರಂಜಿಕುಂ ॥ ತರುಣಕುರಂಗಲೋ-

16 ಚನೆಯರಿರ್ಕ್ಕೆಯಿನೊಪ್ಪುವ ಸೂಳೆಗೇರಿ ಸತ್ಪುರುಷರೆನಿಪ್ಪ ಹೆಮ್ಮೆಯ ವಣಿಗ್ಜನದಂಗಡಿಯಿಂ[ತು] ನೋರ್ಪ್ಪಡಂ ಸುರಗಿರಿಯಿಂ ಪಳಂಚಲೆವ ದೇವಗೃಹಂ ಜಿನಗೇಹಸಂಕುಳಂ ಸಿರಿಗೆಡೆಯಾಗೆ ಕಾಗೆನೆಲೆ ರಂಜಿ-

17 ಸುಗುಂ ಭುವನಾನ್ತರಾಳದೊಳು ॥ ಎನಿಸಿರ್ದ್ದ ಕಾಗೆನೆಲೆ ಭೂವನಿತೆಯ ವಕ್ಷಸ್ಥಳಪ್ರದೇಶದ ನವಮಂಡನವೆನಿಸಿ ಶೋಭಿರ್ಪ್ಪುದಾ ಮಂಡನದೊಳು ನಾಯಕದ ತೆಱದೆ ನಾಳುಪ್ರಭುವಿಪ್ಪ ॥ ಪುರುಷಾಕಾರದ ಮನ್ದ-

18 ರಗಿರಿಯೆಂಬುದು ಮರ್ತ್ತ್ಯರೂಪಮಂ ತಾಳ್ದಿದ ಸಾಗರವೆಂಬುದು ಹೆಮ್ಮೆಯ ತಾಯಿಗರುವೆಂಬುದು ಬರ್ಮ್ಮಗೌಂಡನಂ ಜಗವಿಸಿತು ॥ ವಿನಯದ ಕಣ್ ಬರ್ಮ್ಮಂಗಂ ಜನಸಂಸ್ತುತೆ ಕಾಳಿಯಬ್ಬೆಗಂ ಪುಟ್ಟಿದನಿಪ್ಪ ನಿ-

19 ಧಾನಂ ಸತ್ಯದ ತಾಯಿಮನೆಯೆನಿಪಂ ವೈರಿಪಿಳಯಕಾಳಂ ಕಾಳ ॥ ತನ್ನಯ ಬಿಣ್ಪನೇಳ್ಗೆ ಪಡಿಗಟ್ಟಳೆಯಾದುದು ಮನ್ದರಕ್ಕೆ ತನ್ನುಂನತಿ ಮೇರುವಿಂಗೆ ನೆಳಲಾದುದು ತಂನಯ ಪೆಂಪು ವೆತ್ತ ದಾನಂ

20 ನವಕಲ್ಪವಲ್ಲರಿಗೆ ಪಾಂಗುಡಿಯಾದುದೆನಲ್ಕೆ ಮರ್ತ್ತ್ಯರಾರುಂ ನೆಱೆ ಪೋಲರಾರ್ತ್ತರೆಪರೆ ಕಾಳನ ಸುದ್ಧಯಶೋವಿಶಾಳನ ॥ ನೀಡೆನಲೀಯದಿತ್ತು ಬುಧಸನ್ತತಿಯಂ ಪದಪಿಂ ಕೃತಾರ್ತ್ಥರಂ ಮಾಡಿದನೇಳು-

21 ಮಬ್ಬಿಗಳೆನಿಪ್ಪಿದ ಕೀರ್ತ್ತಿಯನೀಗಳುಜ್ವಳ ಮಾಡಿದನದ್ರಿಜೇಶನ ಮಹೇಶನ ರಂಜಿಪ ಸುಪ್ರತಿಷ್ಠೆಯಂ ಮಾಡಿದನೀ ಜಗಂ ಪೊಗಳೆ ಕಾಳಮನೇಂ ಕೃತಕೃತ್ಯನಾದನೋ ॥ ನಲಿದುತ್ನಾ-

22 ಪದಿನೊಲ್ದು ಮಾಡಿಸಿದನಾ ಕಾಳೇಶ್ವರೇಶಂಗೆ ದೇಗುಲಮಂ ರಂಜಿಪ ನಾಟ್ಯಶಾಲೆಯುನತಿಪ್ರಖ್ಯಾತಿ ವೆತ್ತಿರ್ದ್ದ ವಾಗ್ಗಲನಾಮಂಟಪಮಂ ದಿಶಾಪ್ರತಿಮೆಯಂ ಕೈಳಾಸಮಂ ಪೋಲ್ದುದೆಂದು ವಂನ್ನ[ಂ] ಧರೆ ಕಾಳ-

23 ಗಉಂಡನೆ ವಲಾ ಧನ್ಯಂ ಪೆಱರ್ದ್ದನ್ನರೇ ॥ ವಿಳಸಿತಗುಣ ಕಾಳಂಗಂ ಕೆಳೆಯಬ್ಬೆಗಮುದಿತಕೀರ್ತ್ತಿ ಸಾಶ್ವತಲಕ್ಷ್ಮೀನಿಳಯಂ ಪುಟ್ಟಿದನಖಿಳಾತಳಸಂಸ್ತುತನಾಯ್ತುವರ್ಮ್ಮನವಿಕಳಧರ್ಮ್ಮ ॥ ನಡುನಾಡತೀರ್ತ್ಥವೆಂ-

24 ಬುದು ಬಡವರ ನಿಧಿಯೆಂಬುದಖಿಳಧಾತ್ರೀಕೈಗನ್ನಡಿಯೆಂಬುದು ಜಯಲಕ್ಷ್ಮಿಯ ತೊಡವೆಂಬುದು ಲೋಕವ್ಯೈತವರ್ಮ್ಮನ ಪೆಂಪ ॥ ಜವಳಿ ಝುಣಂಬವಂ ಕೊಡೆಯುನನ್ದಳಮಂ ಚಮರೀ-

25 ರುಹಂಗಳಂ ಭುವನದ ಕಣ್ಮಷ(ಂ)ಣ್ಯದ ಫಳಂ ದಿಟಮೆಂಬಿನವಂಗಚಿತ್ತಮಂ ತವದೊಲವಿನ್ದೆ ಚಿಕ್ಕುಡಲಂಕದ ಕಾಳಿಗಮಾದಿಯಾಗಿರಲು ವಿವಿಧಗುಣಾರ್ಣ್ಣವಂಪಡದನೆನ್ನದರ್ಣ್ಣಗಳ್ವಾಯ್ತುವ-

26 ರ್ಮ್ಮನ ॥ ಆದಿಕ್ಕಪ್ರತಿಮೆಯನೆಸೆವಾದಿತ್ಯಗೃಹಮನರ್ತ್ಥಿಯಿಂ ಮಾಡಿಸಿದಂ . . ದೇಂ ಕೆಱೆಯಂ ಕಟ್ಟಿಸಿ ವೇದಿನಿ ಪೊಗಳಲ್ಕೆ ಧರ್ಮ್ಮಮಂ ನಿರ್ಮ್ಮಿಸಿದ ॥ ಆತನ ತಮ್ಮಂ ಭೂವಿಖ್ಯಾತಂ ಸೌಜನ್ಯ-

27 ಗುಣಸಮೇತಂ ಮಹಿಮೋಪೇತಂ ರೂಢಿಯ ಮನ್ನೆಯಗೇತಂ ಸುಕವೀಂದ್ರತುಕವಿ[ಕಾ]ಶ್ರಯ ಭೂತ ॥ ಮನ್ನೆಯಗೇತಂಗಂ ಗುಣದುನ್ನತಿಯಂ ತಳೆದ ಕಂಚಿಕಬ್ಬೆಗಮೊಗೆದವರ್ಮ್ಮನ್ನಿನ ಪಾಂಡುತನೂಭವ-

28 ರನ್ನಪೂರ್ವ್ವರುಶಾಸ್ತ್ರತೀರ್ತ್ಥರ್ಸ್ಯವರ್ಮ್ಮರ್ಕ್ಕಳ ॥ ಪಿರಿಯಂ ಬಮ್ಮನೆ ಧರ್ಮ್ಮರಾಜನೆಸೆದಿಪ್ಪಾ ದಾಸಮಂ
ಭೀಮನೆನ್ನರೊಳಂ ಬಲ್ಲಿದನಪ್ಪ ಶೋಭನನೇಂ ತಾಂ ಮಿಕ್ಕರ್ಜುನಂ ಸಿಂಗಮಂ ಪುರುಷಾರ್ತ್ಥಾ
ಗ್ರಣೀ ಯೆಂಬಚನುಂ ನ–

29 ಕುಳಸಾದೇವಕರ್ಕ್ಕಳಾಗಲು ವಸುಂಧರೆಯೊಳು ಪಾಣ್ಡವರಿನ್ನುವಿದರ್ರೆನಲನ್ತೀಯಯ್ವರುಂ ರಂಜಿ
ಪರು ॥ ಅವರೊಳತಿಪ್ರತಾಪವಿಧವಂ ಕಲಿಶೋಭನನುತ್ತರೋತ್ತರಪ್ರವಿಪ್ರ–

30 ಳಭಾಗಿ ಶೋಭನನಪಾರಯಶಂ ಕಲಿ ಶೋಭನಂ ಗುಣಾರ್ನ್ನವಶುಚಿನಾಂಶು ಶೋಭನನುದಾರದ
ತಾಯ್ಮನೆ ಶೋಭನಂ ಬದಾಪ್ಪವರಿವರನ್ನನೇ ನಿಜಕುಳಾಂಬರಚಣ್ಡಮರೀಚಿ ಶೋಭನ ॥ ಕಲಿತನ–

31 ದುಕ್ಕಿಂ ಪಲರನಂಜಿಸಿದಂ ರಣರಂಗದಲ್ಲಿ ಮೂದಲಿಸಿದನಂ ಪಡಲ್ವಡಿಸಿದಂ ಸುಣ್ಣಸೊಕ್ಕಿದನಂ
ಪೋರಳ್ಚಿದಂ ಚಲದೊಡತುರ್ ಪನ್ನೆರಡು ಮತ್ಸ್ಯಯಪಟ್ಟುಮನೊಂದ ಕೊನ್ತದೊ–

32 (ದೊ) ಳು ನಿಲಿಸಿದನೆನ್ನಡಾರಳವೋ ಶೋಭನನೊಪ್ಪುವ ವೀರಚೇತ್ತರ ॥ ಐನೆನ್ನೀಳಿಸಿ ಕೆಮ್ಮನೆ
ತಾನುಚಿತಂಗೆಟ್ಟು ಕಲಹಮಂ ವಾಡೆ ಜಯಶ್ರೀನಿಧಿ ಚೆಂಗಾಳ್ವನ ಮದದಾನೆಯುನಿಱಿದಂ ಪ್ರ–

33 ತಾಪಿ ಶೋಭನವೀರ ॥ ತುರಗದಳಂ ರಣಾಂಗಣದೊಳಿನ್ತಿಸಂ ಕರೆದೋಡೆ ಚೇರನಂ ಭರವ
ಸದಿನ್ದವೇಱ ಕಲಿಶೋಭನನೋವದೆ ಪಾಯಿಸುತ್ತ ನಿರ್ಬ್ಬರಧುಜಬಳ್ಗದಿಂ ತಱಿಸೆ ಬಿರ್ದ್ದ
ಶಿರಂ ಕಡಿವೋದ ಮುಂ–

34 ಡವಳ್ಗರುಳ ಬಳಂಬಿ ನೆತ್ತರ ಕಡಲು ಕರವಾಸುರವಾಗದಿಕ್ಕುವೇ ॥ ಧಂಗಂ ಬಡೆಯದ ಕಲಿಸೆ[ರ]
ಗಿಂಗೆ ಮನಂದಾರದ.ಚಿತದಾನವಿನೋದಂ ಸಾಂಗತ್ಯಸತ್ಯವಿಭವಂ ಸಿಂಗಂ ಜಯದುತ್ತರಂಗ
ನಣ್ಣನಸಿಂಗ॥ ಪರ–

35 ವನಿತಾಪ್ರಸಂಗದೊಡಗೂಡದ ಶೌಚಗುಣಂ ಕಳಂಕದೊಳು ಪೊರೆಯದ ಸಚ್ಚರಿತ್ರವಯಸಕ್ಕೆಡೆಯೂಗ
. . ತನಂ ಭಯಾತುರತೆಯೊಳೊನ್ದದಣ್ಮು ಕುಜನಾಶ್ರಯವಲ್ಲದ ಹೆಮ್ಮೆ–

36 ಯೆಂದು ಬಿತ್ತರಿಸದರಾರೊ ಬಾಪ್ಪುಮಾಮ ಸಿಂಗನನಾ ಜಯಮುತ್ತರಂಗನ ॥ ಅನುಪಮಮಪ್ಪ ಹಾವರಿ
ಯ ಕಾಳೆಗದೊಳು ಕಲಿಜಿನ್ನರಾವುತಂ ಮುನಿದಿದಿರಾಗಿ ತಾನೆ ಕಲಿ ಸಿಂಗನೆದುರ್ತು ಭುಜಾ–

37 ಸಿಯುನ್ದ ಚಿಕ್ಕನೆ ನಡೆಪೊಯ್ಯೆ ಪಾಱುವ ಸಿರಂ ನೆಱೆ ಪೋಲ್ತುದು ವೀರಲಕ್ಷ್ಮಿ ಸಿಂಗನೊಳೊಡಗೂಡೆ
ಭೂವನಿತೆ ಪೊತ್ತ ಸುಮಂಗಳರತ್ನಕುಂಭವ ॥ ಆತನ ವಲ್ಲಭೆ ಮುನ್ನಿನ ಸೀತೆಯುನಿಳಿಸುವ ಪತಿ–

38 ವ್ರತಾಗುಣದಿ ರೂಪಾತಿಶಯವಿನ್ತೀ ಭೂತಳದೊಳು ಬಾಗಣಬ್ಬೆ ಪೆಂಪಂ ತಳೆದಳು॥ ನೆಗಳ್ದ ಗುಣಾಬ್ಧಿ
ಸಿಂಗವಿಭುಗಂ ಕುಳಭೂಷಣೆಯಪ್ಪ ಬಾಗಣಬ್ಬೆಗಮವನೀತಳಂ ಪೊಗಳೆ ಪುಟ್ಟಿ–

39 ದರು ಜ್ವಳಚಾರುಕೀರ್ತ್ತಿಲಕ್ಷ್ಮಿಗೆ ಪತಿಗಳು ವಿವೇಕನಿಧಿಗಳು ವಿಧುಶೋಭನ ಬಮ್ಮಗೌಂಡುಗಳು ॥
ಘನತರ ಸೌರ್ಯ್ಯಶಾಳಿ ಕುಸ್ಮಾಯುಧಸನ್ನಿಭ ರೂಪವಿಭ್ರಮಂ ದಿನಕರತೇಜನನ್ನ[ೞ]ವಗಧೀ–

40 ರನಪಾರಗುಣಾವಳಂಬನಂ ವಿನಯವಿಳಾಸನೆಂದು [ಧ]ರೆ ಬಣ್ಣಿಸುತಿಪ್ಪುದು ಸಿ[ಂಗನಂಕ]ಕಾಱನ
ನತಿನೀಜನಂ ನೆಗಳ್ದ ಶೋಭನನಂ ಸಕಳಾವನೀತಳ॥ ಮುನಿದಡೆ ಸಿಂಗದಗುರ್ಬ್ಬಂ ನೆನೆಯಿಸುವಂ

41 ಕೂರ್ತ್ತಡಿಂದ್ರಭೂಜದ ಪೆಂಪಂ ನೆನೆಯಿಸುವನೆನ್ತಡಾ ಶೋಭನನದಟನುದಾರವ್ರಿತ್ತಿ[ಯಂ]
. ಲ್ಯವರಾ . . ಪುರುಷಾರ್ತ್ಥದ ನೆಲೆ ಸತ್ಯದ ಕರು ಪರಹಿತಲಕ್ಷ್ಮಿಗಿಕ್ಕೆದಾಣಂ ಸೌಚಾ
ಚಾರದ

42 ಬಾಳ್ಕ್ಕೊದರೆನ್ನದೆ ನರನೆಂಬುದೆ ಸಿಂಗನಣುಗನಂ ಶೋಭನನ ॥ ಅವನೊಡನೆಪುಟ್ಟಿದಂ ಕೈರವ
ವಲ್ಲಭ . . . . . . . ವತಮೆಂಬವೋಲುದಿತಕೀರ್ತ್ತಿಯ ಲಕ್ಷ್ಮೀಧವನ[ಂ] ಜಯ
ಲಕ್ಷ್ಮಿಗಾಣ್ಮನೆನಿಸಿ–

43 ವ ಬಮ್ಮ॥ ಧವಚರಣಾಬ್ಜಷಟ್ಚರಣನೂರ್ಜ್ಜಿತಭಕ್ತಿಲತಾಮನಟ್ಟೆಯುಂ ಕುವ[ರೆ] . . . .
ಲಕ್ಷ್ಮೀಸಿಟಿಳಾಗ್ರಲರಾಮನಾಶ್ರಿತೋ[ತ್ಸ]ವಕರನರ್ಣ್ಣವ–

44 ಪ್ರಶಿವಹಾರಗಭೀರನೆನುತ್ತೆ ಕೀರ್ತ್ತಿ ಭೂಭುವನಮದಾಗಳುಂ [ಬಯಿಸಿ] ಬಣ್ಣಿಸ . . .
. . ಗೌಂಡನ॥ ಮುರಹರನನ್ತೆ ಲಕ್ಷ್ಮಿಗಧಿನಾಯಕನಬ್ಜಜನನ್ತೆ

45 ಪೋಲು ಕಳಾಪರಿಣತನಂಬುಜಪ್ರಿಯನವೋಲು ಘನತೇಜವಿರಾಜಿತಂ ಸುಧಾಕರನ[ವೋ] . . .
ಯ ಪ್ರಿಯನೆನ್ಮುನ[ಹ] . . . . ಬಿತ್ತರಿಸುವದಾಗಡುಂ

46 ನುತಯಶೋಲತೆಗಾಮ್ಮನೆನಿಪ್ಪ ಬಮ್ಮನ॥ ಕಳದ್ವಕಿಶೋರಕೇಸ[ರಿ]ಗೆ ಕೊಳ್ಕಸಗಿದ್ದವಿಷೋ
ರಗಂಗೆ ಕು . . . . . . . . . . [ನೋ] ಪ್ರ್ವಡಗ್ಗಳವೆ–

47 ನ ಕೊನ್ದು ತಱಗುವನರಾತಿಬಳಂ ತಲೆದೋಱದೆ ಬರ್ಮ್ಮಗಂ ಮುಳಿದಡೆ ಮೃತ್ಯು ಮೀಱುವಡೆ
. . . . . . . . . . . . . ಗರ್ಪ್ಪಣ-

48 ವ ತೋಳ್ತೊಳಿರ್ದ್ದು ಪೆಯ್ಮೆರ್ಚ್ಚಿದ ವೀರಲಕ್ಷ್ಮಿ ನರಮಾಂಸವ [ನೀಂಬ ಮ್ರ್ಮಕಲ್ಲ] ವೈರಿಗನ್ನರ್ಚ್ಚಲದಿ
. . . . . ಬೀಡಿನೆ . . . . . . . ರಚಿ

49 ರಾಯುವನಾಜಿಯೊಳೇಂ ಪ್ರವೀಣನೋ ॥ ರಣದರೆ ನಾಟ್ಯಶಾಲೆ ಜ[ಯು] . . . . . . .
. . . . ವ್ರ್ಪ . . . . . . . . . ಪ್ಪವಂ ತಳೆದ [ತ]-

50 ಳವೆನಲು ರಿಪುವೀರರಟ್ಟೆ ತಿಂತಿಣಿವಿಡಿದಾಡೆ ನಟ್ಟಿಯಱರಂತಿರಲಾಗಿಪನೆಂದಡಿದೇನಣ . . .
. . . . . . . . ನಶೊ . . . . . . ನ ವಿಕ್ರಮಕ್ರಮ ॥

51 ಧುರದೊಳರಾತಿಸೇನೆಯೆನಿಸಂ ತಲೆದೋಱದಡಂನ್ತೆ ಕಾಣುತಂ ಪರಿವುದು ಪತ್ತಿಮುತ್ತು[ವುದು]
ಸುತ್ತು[ವುದೆ]ತ್ತುವುದೊತ್ತಿ ಕೊಲುವುದಾಸುರತರವಪ್ಪಿನಂ ತು[ಳಿ]-

52 ವುದೀ ಕಲಿಬಮ್ಮಿಗನೆಂಬ ಭೀಕರಮದವಾರಣಂ ಜಿತರಣಂ ಕಲಿಸಿಂಗನ ಗನ್ಧವಾರಣ ॥ ಅರಿಶಿರವಂಬು
ಜಂ ಕರುಳಮಾಲೆ ಪೊದಳ್ದ ಮೃಣಾಳಮಾಳೆ ನೆತ್ತರೆ ವಿಮಳಾಂಬು [ಬಾ]-

53 ಳುಡಿಯ ಬಾಳೆಗಳಾಗೆ ರಣಾಗ್ರವೆಂಬ ತಾವರೆಗೊಳನಂ ಕಲಂಕಿ ಜಯುವುಂ ಗೆಡೆಗೊಳ್ವುದು ಬಮ್ಮಣ
ಭೀಕರ[ಮ]ದವಾರಣಂ ಜಿತ . . ಕಲಿಸಿಂಗನ ಗನ್ಧವಾರಣಂ॥ ಗಿರಿಜೆಗವೀ-

54 ಶ್ವರಗವನುರಾಗದೆ ಷಣ್ಮುಖನೊಲ್ದು ಪುಟ್ಟುವನ್ತಿರೆ ಕಲಿ ಶೋಧನಂಗೆಮಖಿಳಾತಳೆಸುನ್ನೃತೆ ಮಲ್ಲಿಕಾ
ವೆಗಂ ನಿರುಪಮಕೀರ್ತ್ತಿ ವೀರಲಕ್ಷ್ಮೀಪತಿ ಪುಟ್ಟಿದನಾತ್ಮವಂಶವಿಸ್ತರಮಹಿಮಾ-

55 ಪ್ರಥಾಪವೆಸುತಿಪ್ಪುದು ಚೀಲಮನಂ ಜಗಜ್ಜನ ॥ ಇನಜನನನ್ನಿ ಶಕ್ರಜನ ಶೌರ್ಯ್ಯಗುಣಂ ರಘುಜಾತ
ನಪ್ಪ ರಾಮನ ಚಲವಿಂದ್ರಭೂರುಹದ ಚಾಗಮಹರ್ಪ್ಪತಿಯುದ್ಧ-

56 [ಕೇ]ಜವಿನ್ನಿನಿತುಮನೊಯ್ದು ಮಾಡಿ ಬಿದಿ ಪುಟ್ಟಿಸಿ ರಾಗದಿ [ನಾ]ಯುವೊಯ್ದ[ನ್ನ]ಸಾದಿನ
ವುರ್ವ್ವಿ ಬಣ್ಣಿಪುದು ಚೀಲನ ಸದ್ಗುಣಸಂಪದಂಗಳ॥ ಅರಿಬಳವೆತ್ತಿದಲ್ಲಿ ದಶಕಂಧರನಂ-

57 [ಬು]ದು ವಂದಿ ಬನ್ದು ಬಿತ್ತರ . . . . . . . . . . . . . ಗನಾವ
ರ ನಯನಾಂಶುಗ . . ಬಳಸುವಲ್ಲಿಗೆ ಚಿತ್ತಜನೆಂಬುದಂಜಿದಂಗೆರೆಡನೆಯಾಬ್ಧಿಯೆಂ[ಬು]-

58 ದು . . . . . . ಸಮ . . . ಕಲಿ ಚೀ . . . . . . ಸಿಜು . . . .
ಕವಿರೋಧಿಗಳಾಗಿರೆ ಮೆಚ್ಚಿ ಸೀಳ್ದು . . . ವಿಗೆ ಕೊಂಬಿನೊ

59 . ಕತು . . . . . . . . . . . ಚೀಲನ . . . . . ॥
ಸಿಂದುರವನ್ನ . . . . . ಳ ಕೊಳ್ಕ . . . . . . ವತಂದೆ [ಬ]

60 . . . ರುಳು . . . . . . . . . ಗನೆ ತನ್ನ ಚಿತ್ತದೊಳು ನಿಂದು ನೀವಿ .
. . . . . . . ನೆಗಳ್ದ . . . . . . . [ಗ]-

61 [ನ್ಧ]ವಾರಣ ॥ ಅ . . . . . . ದ್ರೀಂದ್ರನೊಳು ರಂಜಿಪ ಸುರಮಹೀಜ ಪೂ . .
. . . . . . . [ನಾ]ಗರತಟದೊಳು ಪದ್ಮರಾಗ ಸಮಂ

62 . . . ತರಿಪಂಚಿತ್ತಂಕೆ ಕಾಳೇಶ್ವ . . . . . . . . ರ್ಜ್ಜಿತಂ ದಾಪ್ಪು ಲೋಕಾ
ಭರಣಯೋಗೀಂದ್ರ . . . . . . . . ಆ ಮಹಾನುಭಾವನನ್ವಯಖ್ಯಾತಿಯೆಂ-

63 [ತೆಂದ]ಡೆ॥ ಸೊಗಯಿಪ ಶಾಸ್ತ್ರ . . . . . . . . . . ಳ ತತ್ವಕಳಾ
ವಿಳಾಸಪಾರಗನಭಿಮಾನ . . . . . . . . . ವೈಭವಕ್ಕೆ ನೆಲೆಯಾದವರಾ
ಕೊಳನೂರ

64 . . . ದ್ರಶಕ್ತಿಗಳ ಮಹತ್ವಮಂ ಪೊಗಳಲಾರಳವಬ್ಧಿಪರೀತಧಾತ್ರಿಯೊಳು ॥ ಆ ವಿಧು .
. . . . . . . ಳಮುಖಸಮಯಲಸತ್ಕುಶ್ರೀವಲ್ಲಭನೆನೆ ನೆಗಳ್ದಂ ಕೇಪ-

65 [ಲಮೆ ಶ್ರೀ]ಕಳೇಶ್ವರಬ್ರತಿನಾಥ॥ ಹರಚರಣಕಮಳಭೃಂಗಂ ಗುರುಕುಳಕುಮಳೆಯ . . . .
. . . . . ಕಳಕಳಾಧರನೆನಿಸಿ ಪೆಂಪುವಡೆದಂ ಧರೆಯೊಳಗೀ ಶ್ರೀಕಳೇಶ್ವರಬ್ರತಿನಾಥ

66 . . . . ಸತನಮಳವಾಣೀನವಯೌವನವ ನವಸನ್ತನನುಪಮವಿದ್ಯಾಧನನಂ ತತ್ವ[ವಿಚಾರಾ]
ರ್ಣ್ಣವಚಂದ್ರ ಶ್ರೀಜ್ಞಾನಮೂರ್ತ್ತಿ ಲೋಕಾಧರಣ॥ ಶರಣಂ ವಿದ್ವತ್ಸಭಾವಿಶ್ರುತವಿಧ-

67 [ವನಾ]ವಗಂ ಚೆಲ್ವುವೆತ್ತಾಭರಣಂ ವಾಕುಶ್ರೀಗೆ ದಾನಬ್ರತದ ಮಹಿಮೆಗಾಳಂಬನಂ ದ.ಸ್ತವಸ್ತಂ ಹರಣಂ ಶ್ರೀಭಾಕ್ತಿಕರ್ಗ್ಗಂದಡೆ ಪೆಱರಳವೆ ಪುಣ್ಯವಾರಾಶಿ ಲೋಕಾಭರಣಂ ಲೋಕೈಕ-

68 . . . . ಕನಿಳಯಂ ವಿಶ್ವವಿದ್ಯಾನಿವಾಸ ॥ ◎ ಸ್ವಸ್ತಿ ಶ್ರೀಮನ್ಮಹಾಪ್ರಭು ಬಮ್ಮಗಾವುಣ್ಡನುಂ ಚೇಲಗಾವುಣ್ಡನುಂ ಕಾಗನೆಲೆಪನ್ನೆರಡಕ್ಕಂ ಹೊಂದಿಯೊರ್ಗ್ಗಂ ಕುಪ್ಪಗೆಡೆ-

69 . . . ಕಥಾವಿನೋದದಿಂ ಗಾವುಂಡುಗೆಯ್ಯುತ್ತಮಿರ್ದ್ದು ಬಾಸವೂರನೂಱನಾಲ್ವತ್ತಱ ಮನ್ನೆಯಂ ಕಲಿಯುಮರಸನುಂ ಸಮಸ್ತಪ್ರಜೆಗಳಿರ್ಪ್ಪದಿಂಬಱುವೀ ಧರ್ಮ್ಮ-

70 . . . . [ವಾ]ಗಲು ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೫ನೆಯ ಶಾರ್ವ್ವರಿ ಸಂವತ್ಸರದ ಮಾ[ಘ ಶು]ದ್ಧ ೨ ಸೋಮವಾರವುತ್ತರಾಯಣ ಸಂ-

71 . . . . . . ದಂದು ಶ್ರೀಮತ್ಕಾಳೇಶ್ವರದೇವರಂಗಭೋಗಕ್ಕಂ ಧೂಪದೀಪನೈವೇದ್ಯಕ್ಕಂ ತಪೋಧನರಾಹಾರ . . . . . . . . ಕಂಥದ ಸೀರೆಯರ್ಗ್ಗಂ ಸ್ವಸ್ತಿ ಯಮ-

72 . . . . . . . . ದಾರಣಮೌ[ನಾನುಷ್ಠಾ]ನಧ್ಯಾನಸಮಾಧಿಶೀಳಸಂಪನ್ನರಪ್ಪ ಶ್ರೀಮತು ಲೋಕಾಭರಣಪಣ್ಡಿತರ . . . . . . . ರಾಪೂರ್ವ್ವಕಂ ಮಾಡಿಕೊಟ್ಟ ಧರ್ಮ್ಮ ಬಾಸಉರ

73 . . . ಗೆ ಗರ್ದ್ದೆ ಮತ್ತ . . . . ಊರ ಮೂಡಣ ಬಳ್ಳಿಯಗಟ್ಟದ ಕೆಳಗೆ ಹಾಳಗೊಟದ ಗರ್ದ್ದೆ ಮತ್ತಲೊಂದು . . . . . . ಗ್ಗೆಱೆಯ ಕೆಳಗೆ ಗರ್ದ್ದೆ ಕಂಮ ಅಯ್ವತ್ತು ಒಂಮೊಱ-

74 . . . . . . ಕೆಳಗೆ ಗದ್ದೆ ಕ[ಮ್ಮ] ಅಯ್ವತ್ತು ಕಾಗನೆಲೆಯ ಪಿರಿಯಗೆಱೆಯ ಕೆಳಗೆ ಅಡಕೆದೋಂಟ ಮತ್ತಲೊಂದು ಆ ತೋಂಟದ ತೆಂಕಲು ಹೂವಿನ ತೋಂಟ ಕಮ್ಮ ಯಿರ್ಪ್ಪತ್ತು ಆ-

75 . . . . . ಗುರುಗಳ ಭಿಕ್ಷೆಗೆ ಗದ್ದೆ ಮತ್ತಲೊಂದು ಆ ಬಯಲತುದಿಯ ಮಡವಾಯಲು ಗದ್ದೆ ಮತ್ತಲೊಂದು ಕಂಮ ಅಯ್ವತ್ತು ದೇವಂಗಟ್ಟದ ಕೆಱೆಯ ಕೆಳಗೆ ದೇವರ ನಿವೇದ್ಯಕ್ಕೆ

76 . . . . . . ಬಂಮೋಜಂಗೆ ಗದ್ದೆ ಮತ್ತಲೊಂದು ಪಾತ್ರಪಾವುಳಕ್ಕೆ ಗದ್ದೆ ಮತ್ತಲೆರಡು ಏಟಹೆಯ ಗಟ್ಟದ ಕೆಱೆಯ ಕೆಳಗೆ ಮಠದ ಹೆಗ್ಗಡೆ ಬಂಮಣಂಗೆ ಗದ್ದೆ ಕಂಮ ಅಯ್ವತ್ತು

77 . . . . . . . ಕೆಱೆಯ ಕೆಳಗೆ ರೂವಾರಿ ಸಿಂಗೋಜಂಗೆ ಗದ್ದೆ ಕಮ್ಮ ಅಯ್ವತ್ತು ಹಕ್ಕಲು ಮತ್ತಲೊಂದು ದೇವಂಗಟ್ಟದ ಕೆಱೆಯ ತೆಂಕಲು ಪಾತ್ರಪಾವುಳಕ್ಕೆ ಕಿಸುಮತ್ತಲು ಹಂನೆ-

78 . . . . . . . ಗಡು ಹಳ್ಳಿಯಂ ದೇವರ ಕಾಣಿಕೆ ಗದ್ಯಾಣಂ ೧[೨] ಪಾಂಡಿಯೂರ ಹಳ್ಳಿಯಲುಂ ಕಾಣಿಕೆ ಗ ೩ ಕುಪ್ಪಗೆಡೆಯಲು ಕಾಣಿಕೆ ಗ ೧ ದೇವರ ಪುರದೊಳಗೆ ನಂದಾ-

79 . . . . . . ಕಲುಂ ಸೊಟಗೆಣ್ಣೆಯಂ ಬಿಟ್ಟರು ನಖರ . . . . . . . . [ಪ]ಣವಂ ಬಿಟ್ಟರು [ಪ]ನೊರ್ಬ್ಬರು[ಂ] ಹೇಱುಂಗೆ ಭತ್ತಬಳ್ಳ ೨ ಬಿಟ್ಟರು ಎಲೆಯ ಬೋಜಂಗರು . . . . . . .[1]

## No. 113

(*B.K. Nos. 153 and 154 of 1933–34*)

BIJAPUR, BIJAPUR TALUK, BIJAPUR DISTRICT.

*Stone (A–34) in the Museum.*

**Vikramāditya VI—A. D. 1121**

This inscription in Sanskrit language and Kannaḍa characters is dated in **Śaka 1043, Plava, Mārgaśirsha su. Paṁchami,** corresponding to **A. D. 1121, November 16, Wednesday.**

1 The continuation is lost.

On this day which was his birthday, **Gōvinda-Daṇḍādhipa** made a gift of 370 *nishkas* for the purpose of worshipping the gods **Brahma, Vishṇu** and **Īśvara** in the *agrahāra* **Pauṭhage** (modern Sālotgi), and also for feeding the visitors to the place on the birthday of the donor every year. Gōvinda-Daṇḍādhipa was the sister's son of **Anantapāla**, the famous general of the **Chālukya king Vikramāditya**.

Below this record is engraved in Kannaḍa another grant of money made by the same donor, for the purpose of feeding annually the assembly of *Āndhradaṇḍa* on the *Pūrṇima* of *Māgha*, which was the anniversary of the death of his daughter-in-law **Padmāvati**. This record is numbered as B.K. No. 154 of 1933-34.

## Text

1 ◎ ಸ್ವಸ್ತಿ ॥ ಶ್ರಿಯಮುರಸಿ ದಧಾನೋ ದೇವತಾನಾಂ ನಿಧಾ-
2 ನಂ ಸುರರಿಪುರಿಪುರಸ್ತಿ ಸ್ವಸ್ತಿಧಾಮಾ ತ್ರಿಧಾಮಾ
3 ಜಯತಿ ಜಠರಜಾತಂ ಯಸ್ಯ ತದ್ವಾರಿಜಾತಂ ಭುವ-
4 ನಭವನತಕ್ಷ್ಣಃ ಕರ್ಮ್ಮಶಾಲೇವ ಧಾತುಃ ॥ ತಸ್ಮಾದಜೋ-
5 ಜನಿ ಜಗಜ್ಜನಕಃ ಶ್ರುತೀನಾಮೇಕೋ ನಿಧಿರ್ಮ್ಮನಸಿ ತಸ್ಯ
6 ಸ ಕಶ್ಯಪೋಭೂತ್ ಸರ್ವ್ವಪ್ರಜಾಪತಿಪತಿರ್ಯ್ಯತ ಏ-
7 ತದಾಸೀದ್ವಿಶ್ವಯತ್ಸುರಾಸುರನರಾದಿಜಗತ್ಸಮಸ್ತಂ । -
8 ಲಕ್ಷ್ಮೀಜನ್ಮಗೃಹಾ ಗುಣೋಜ್ವಲಮಣಿಕ್ಷೇತ್ರಾಃ ಸುವಿ-
9 ದ್ಯಾನದೀನಾಥಾಃ ಕೀರ್ತ್ತಿಸುಧಾ[ರ]ಸೋದಯಭುವಸ್ತ್ವ-
10 ಜನ್ಮಚಂದ್ರೋದಯಾಃ ಬಿಭ್ರಾಣಾಶ್ಶತಶಂ ಮಹತ್ವ-
11 ಮತುಳಂ ಮರ್ಯ್ಯಾದಯಾ ಸದ್ವಿಜಶ್ರೇಷ್ಠಾ ವಾರಿಧಯೋ
12 ಯಥಾ ಸಮುದಗುಸ್ತತ್ಕಶ್ಯಪಸ್ಯಾನ್ವಯೇ ॥ ವಂಶಾತ್ತ-
13 ತೋ ಗಣಪತಿರ್ನ್ನಿಜವಂಶಕರ್ತ್ತಾ ಭರ್ತ್ತಾ ಯಥಾ ಗಣಪತಿಃ
14 ಪ್ರಮಥವ್ರಜಸ್ಯ ವಂಶೋನ್ನತಸ್ಸತತದಾನಜಲಾದ್ರ್ರಹ-
15 ಸ್ತಸ್ತಸ್ಮಾತ್ಸುತೋಥ ಸಮಜಾಯತ ಪದ್ಮನಾಭಃ ॥ ವಿಳಸ-
16 ದುಭಯಪಕ್ಷಃ ಸದ್ವಿಜಾನಾಮಧೀಶಃ ಸತತ ಬುಧಸು-
17 ಸೇವ್ಯಃ ಸಕ್ಷವಾಭ್ಯದ್ಗುರುಶ್ಚ ದ್ವಿಜಪತಿಗುರುತೇಜಃ ಪುಷ್ಟಿ-
18 ಹೇತುಃ ಸ ಭಾಸ್ವಾನ್ ಧೃತಬಹುಗುಣರತ್ನಃ ಪದ್ಮನಾ-
19 ಭಃ ಕವೀಂದ್ರಃ । ವಸುದೇವಾದಿವ ಕೃಷ್ಣಃ ಕೃಷ್ಣಃ ಶ್ರೀಪ-
20 ದ್ಮನಾಭತಸ್ಸಮಭವತ್ ದಧದಪಿ ಕೃಷ್ಣತ್ವಮಸ್ಯ ಸ್ವಚ್ಛಾ-
21 ಯೋನಿರ್ಮ್ಮಲೀಕೃತದಿಗಂತಃ । ಸತ್ಯಾನುರಕ್ತ್ಯಾ ಸವಿಶೇಷ-
22 ಯುಕ್ತ್ಯಾ ಸನ್ಮನ್ದನತ್ವೇನ ಚ ಸತ್ಪ್ರವೃತ್ತ್ಯಾ । ಯಶೋದಯಾ
23 ಸಂಧೃತಮಂಗಳತ್ವಾತ್ಕೃಷ್ಣಸ್ಯ ತಸ್ಯಾನುಕರೋತಿ ಕೃಷ್ಣಃ ॥
24 ಶ್ರೀಮದ್ಭರದ್ವಾಜಕುಲಪ್ರಸೂತೇರ್ಮ್ಮಹೇಶದಣ್ಡಾಧಿ-
25 ಪತೇಸ್ಸುತೋಭೂತ್ ಅನಂತಪಾಲೋ ಬುಧಸ್ಯಂದಪಾಳ[ಃ*]
26 ಸಾಕ್ಷಾದ್ಧರಾಯಾಮಿಹ ಧರ್ಮ್ಮಮೂರ್ತ್ತಿಃ । ಹತ್ವಾ ಹಿ-
27 ರಣ್ಯಕಶಿಪುಂ ವಿಬುಧಾಧಿಪಾಯ ದತ್ತ್ವಾನ್ಧರಿತ್ರೀಂ ಜಗ-
28 ತಾಮಧೀಶಃ ಯಥಾ ನೃಸಿಂಹಃ ಪರಿಪಾತಿ ದೇವೋಸ್ಯನಂ-
29 ತದಣ್ಡಾಧಿಪತಿಸ್ತಥೈವ ॥ ಗಾಂಭೀರ್ಯ್ಯವೃತ್ತೇನ ಮಹಾ-
30 ಸ್ಥಿರೇಣ ತಪೋಧೃತಾ ಸತ್ಯವತಾ ಸತ್ಯೈವ ಅಂಭೋದಯೋ-
31 ಪ್ಪಿ ಗಿರಯೋ ಮುನೀಂದ್ರಾಶ್ಶಾಸಂಜಗಂತಿ ದ್ವಿಯುಧಿಷ್ಠಿ-

63 ವಿನಂ ಕುಡುವಲ್ಲಿ ಬಾಗಿಲೊಳು ವಡಿಯುಡುಗುಂ ಸುರದ್ರುಮಮನೊಳ್ಗುಣದೊಳ್ಪು ವಯಃಪ್ರ-
64 ದೇಶದಿಯಂ ಜಡಿಗುವ.ದೆಂದೊಡೇ ಪೊಗಳ್ವುದುಂನತಿಯಂ ವಿಭುಕೇತಗೌಂಡನ(ಂ) ॥ಕಂ॥
ರಾಮಂಗೆ ಹನು-
65 ಮನಂದದೆ ಜೋಮ[ಂ]ಗುಜಿದಡಜುವರಿಗಳಂ ಚಲದಿಂ ಸಂಗ್ರಾಮದೊಳ್ ಕೊಲ್ವನದೞಿಂ
ಸಾಮಂತಲರಾ[ಮನೀ ಕೇ]ತನತಿ-
66 ವಿಖ್ಯಾತಂ ॥ ಲಲನಾರತ್ನವೆನಿಪ್ಪಕರ್ಕಲವದುಗಳು ಕೇತಗೌಂಡನೊಳು ನಿ[ಜಾ]ಲೆಯ . .
. . ಗೌ-
67 ಡಿಯುಂತಿವರೆಸಲವಿಂದಂ ನೆಗಳ್ದ ಚಿತ್ರವಲ್ಲಭೆಯಾದರು ॥ ಅತನ ಸಂಧಿವಿಗ್ರ[ಹಿ] ॥ ಕಂ ॥
68 ದ್ವಿಜಕುಲಲಲಾಮನಪ್ಪೀ ಸುಜನಾಗ್ರಣಿ ಸೇನಬೋವ ಸೋಮಯ್ಯನನೀ ತ್ರಿಜಗಂ ಬಣ್ಣಿಪುದೊ-
69 ಪ್ಪುವ ನಿಜಗುಣಮಂ ಸಚ್ಚರಿತ್ರದೊಂದುಂನ್ನತಿಯಂ ॥ ⁅ಶ್ರೀ⁆ ಸ್ವಸ್ತಿ ಶ್ರೀಮತು ಸಕವರುಷ ಸಾ-
70 ಯಿರದನೂಱನಾಲ್ಕನೆಯನ ೧೧೦೪ನೆಯ ಶುಭಕೃತ್ಸಂವತ್ಸರದ ಮಾರ್ಗ್ಗಶಿರ ಸುದ್ಧ
ಪೌರ್ನ್ನಮಿ
71 ಸೋಮವಾರಮುಂ ಸೋಮಗ್ರಹಣಮುಂ ಬ್ಯತೀಪಾತಮುಂ ಕೂಡಿದಂದು ಶ್ರೀಮಂನಾಳ್ಪ್ರಭು
72 ಸಾಮಂತ ಕೇತಗಾವುಂಡಂ ತಂಮನಾನ್ವಯದಿಪ್ಪಾ(ಷ್ಟ)ದೆಯ್ವ ಶ್ರೀರಾಮೇಶ್ವರದೇವರ ಖಂಡ-
73 ಸ್ಫುಟಿತಜೀರ್ನ್ನೋದ್ಧಾರ ನಿವೇದ್ಯಕ್ಕಂ ಬಿಟ್ಟ ಭೂಮಿ ಹಿರಿಯ ಕೆಱೆಯ ಕೆಳಗೆ ತೋಂಟಕ್ಕೆ ಕಂ-
74 ಬಂ ಹತ್ತು ೧೦ ಗದ್ದೆ ಕಂಬ ಏಪ್ಪತ್ತು ೭೦ [ಕೊಂ]ಡದಿಂ ಬಡಗ ಎರೆಮತ್ತರೊಂದು ಕಂಬ
ಮೂವತ್ತು
75 ಎರೆಮ ೧ ಕ ೩೦ ರಾಮೇಶ್ವರದೇವರಿಂ ಪಡುವ[ಲು] ಮಕ್ಕಿಮತ್ತರೊಂದು ೧ ಏಕಲಂ
ಮೂಡಲು ಕೆಂಗಾ-
76 ಡು ಮತ್ತರೊಂದು ೧ ಮಂ ಗಾಣದಲು ಸೊಲ್ಲಗೆಯೆಣ್ಣೆ ಧಾನ್ಯದಲು ದೇವಗೋಸಗ ದರ್ಮ್ಮಗೊ-
77 ಳಗಪೆರಡು ಕೊಳಗ ೨ ಯಿಂತಿನಿತುಮಂ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾ-
78 ರಣಮೌನಾನುಷ್ಠಾನಜಪಸಮಾಧಿಶೀಲಗುಣಸಂಪನ್ನರಪ್ಪ ಕಲ್ಯಾಣಶಕ್ತಿ ಪಂಡಿತರ್ಗ್ಗೆ
79 ಧಾರಾಪೂರ್ವ್ವಕಂ ಮಾಡಿಕೊಟ್ಟರು ॥ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವ-
80 ಸುಂಧರಾ ॥ ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ ॥ ಕ್ರಿಯ(ಯೆ)ಯಿಂ-
81 ದಿಂತಿದನೆಯ್ದೆ ಕಾಯ್ದ ಪುರುಷಂಗಾಯುಂ ಮಹಾಶ್ರೀಯುಮಕ್ಕೆಯಿದಂ ಕಾ-
82 ಯದೆ ಕಾಯ್ವೀ ಪಾಪಿಗೆ ಕುರುಕ್ಷೇತ್ರಂಗಳೊಳು ವಾರಣಾಸಿಯೊಳ್ ಕೋಟಿ
83 ಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದುದೊಂದಯಶ[ಂ] ಸಾರ್ಗ್ಗುಮಿದೆಂದು ಸಾ-
84 ಱಿಪುದೀ ಶೈಲಾಕ್ಷರಂ ಧಾತ್ರಿಯೊಳು ॥ ಸಾಯಿರಗುಡಿಯ ಕೇತೋಜನ ಖಂಡರಣೆ ॥

## No. 192

*(B. K. No. 85 of 1933-34)*

GUDADĀNVĒRI, RANEBENNUR TALUK, DHARWAR DISTRICT

*Slab set up in front of the temple of Kallēśvara*

### Āhavamalla—A. D. 1183

This inscription referring itself to the reign of **Āhavamalladeva** is dated in Śaka **110[4]**, **Śubhakṛit, Margaśira śu. Pūrṇimā, Thursday, lunar eclipse, Uttarāyaṇa-saṁkramaṇa** In *Mārgaśira* of *Śubhakrit* there was no lunar eclipse, but in *Sōbhakṛit* there was one which fell on Thursday. *Subhakṛit* cited in the record seems to be a mistake for *Sōbhakṛit* In that case the **Śaka** year would be **1105**. The Christian equivalent would then be **A. D. 1183 December 1, Thursday.**

It registers a gift of land in the village **Bāḍa[?]ālūru** in **Binavūru Twelve** by **Vāsudēva—Daṇḍanāyaka**, a subordinate of **Vikramāditya II** of the **Gutta** family, for the worship and offerings to god **Mallikārjuna** of that village, after effecting repairs, etc., to the temple. The village was granted to him by **Vikramāditya I** and **Jōyidēva II**, the grand-father and uncle respectively, of **Vikramāditya II**, who is here referred to as **Kumāra Vikramāditya**. He is also referred to as the son (*putra*) of Jōyidēva II, possibly because of the prevailing Indian practice of calling a nephew as son.

## Text

1 ಶ್ರೀ ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾ-
2 ರಂಭಮೂಲಸ್ತಂಭಾಯ ಶಂಭವೇ ॥ ವರಫೇನಾನೇಕ-
3 [ಶುಂ]ಭದ ಬಹಳತರತರಂಗಂಗಳೊಂದೊಂದನೊಂದಂ ಭ-
4 ರದಿಂ ತಳ್ಪೊಯ್ಯೆ [ಮೇಲಂ]ಗೊಗದು ಪೊಳೆವ ಸೀಮ್ಮೂರ್ತ್ತಿವೆಂಬಂತೆ ಸೂ-
5 ಸುತ್ತಿರಲೋರಂತುದ್ಧುರ್ ತುಂತುರ್ಪ್ಪನಿಗೆಳಸದಳಂ [ಚೆ]ಲುವನಾ-
6 ಳ್ದತ್ತು ಕೂರ್ಮ್ಮೋದ್ಧುರಪಾಠೀನಾದಿಜಾನ್ತದುಗುಳುಗುಳಿತಗಳಧ್ವಾ [ರಾ]ದ್ರಂ ಸಮುದ್ರಂ ॥
ವರಕೂ-
7 ರ್ಮ್ಮೇಂದ್ರಂ ಸುಕಂದಂ ಫಣಿಪತಿವಿಮಳೋತ್ತಾನನಾಳಂ ದಿಶಾಸಿಂಧುರಮುದ್ಯ—
8 ದ್ಗೋತ್ರದೊಬ್ಬಿತ್ತುಕೂಳದಳನಿಚಯಂ ಕೇಸರಂ ದೇಶಭಾಸ್ವತ್ತುಪುರಸಂದೋಹಂ ಸ-
9 ಮಂತುಂನತದಿವಿಜನಗಂ ಕರ್ಣ್ಣಿಕಾಕಾರಮಂ ತಾಳ್ದಿರೆ ಜಂಬೂದ್ವೀಪವಬುಜೋದುಭವಜ-
10 ನಿತಸರೋಜಾತವಿಂತೊಪ್ಪಿತೋರ್ಕ್ಕುಂ ॥ ಪಿರಿದುಂ ಮಧ್ಯಸ್ಥವಾದ್ವೀಪದೊಳಮನಗಂ ತಂ-
11 ನ್ನಗೇಂದ್ರಕ್ಕೆ ತೆಂಕಲು ಭರತಕ್ಷೇತ್ರಂ [ಜ]ನಾನಂದಮನೊದವಿಪುದಾ ಕ್ಷೇತ್ರ-
12 ದೊಳು ನಾಡೆಯುಂ ಸೌಂದರಲಕ್ಷ್ಮೀಜನುಮಗೇಹಂ ನುತಧಾನಸವದೂಕಾಂತಳಂ
13 ಶಾನೆಸಲು ವಿಸ್ತರಿಸಿಕ್ಕುಂ ಕುಂತಳೋರ್ವೀತಳವಬಿಳಸುಧಾಳಂಕ್ರಿತೋದ್ಯದುವಿಳಾಸಂ ॥ ಅಂ—
14 ತೆನಿಪ ಕುಂತಳೋರ್ವೀಕಾನ್ತೆಗೆ ಪತಿಯೆನಿಸಿ ವೈರಿನ್ರಿಪಕುಳವಿಳಯೋ-
15 ಗ್ರಾಂಕಕನೆಸೆವಂ ದೋರ್ಬ್ಬಳಕಾಂಕ್ಷೆಯಿಂ ಬಿಜ್ಜಣಂ ಪರಾಕ್ರಮಧೀಮಂ ॥ ಆತನ
16 ಪ್ರಭಾವೋನ್ನತಿ ಮಂತೆಂದಡೆ ॥ ಅತಿ ಎಳೆಯಾಗಿ ಘೋಷದಗಳಾರವ ವೃಷ್ಟಿದುದೆತ್ತಲೆ-
17 ತ್ತಲಿತ್ತಿದೆ ಚತುರಂಗಸೈನ್ಯಪದಘಾತರಜಃ ಪಟಳಂ ಸಮೀಪವಾಯ್ತುದೆ ನಿಶಿತಾಸ್ತ್ರ-
18 ಕೋಟಿರುಚಿ ಬಿಜ್ಜಣದೇವನ ಧಾಳಿ ಮುಟ್ಟಿದಂದುದು ಶರಣಿಲ್ಲ ಸತ್ತೆವೆನು-
19 ತಿಪ್ಪುದರಾತಿನ್ರಿಪಾಳಜಾಳಕಂ ॥ ಧುರಧೀರಂ ಬಿಜ್ಜಣೋರ್ವೀಪತಿನೃತನ ತನೂಜಾತನು-
20 ದ ದಾವಿನೂತೋದ್ಯುರತೇಜಂ ಪುಣ್ಯಪುಂಜಂಗಳಚುರಿಯಕುಳಾಂಭೋಜ-
21 ನನ ಮಿತ್ರನ ದುವ್ರಿತ್ತರಗಂಡಂ ಯುದ್ಧಶೌಂಡಂ ಸೊಗಯಿಪನೆನಸುಂ ರಾ-
22 ಯನಾರಾಯಣಂ ವಿಸ್ತರಕೀರ್ತ್ತಿಶ್ರೀವಿಳಾಸಂ ವಸುಧೆಯೊಳದಟಂ ದಾಕುಮಲ್ಲಕ್ಷಿ-
23 ತೀಶಂ ॥ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜಂ
24 ಪರಮೇಶ್ವರಂ ಪರಮಭಟ್ಟಾರಕಂ ಗಳಚುರಿ ಮಕುಳೆಕಮಳಮಾರ್ತ್ತಂಡ ಕದನಪ್ರ-
25 ಚಂಡ ಮಾನಕನಕಾಚಳಂ ಸುಭಟರಾದಿತ್ಯ ಕಲಿಗಳಂ ಕಸಂ ಗಜಸಾಮಂತ ಶರಣಾ-
26 ಗತವಜ್ರಪಂಜರಂ ಕಾಳಾಂಜರಪುರವರಾಧೀಶ್ವರಂ ಸುವರ್ಣ್ಣವ್ರಿಷಭಧ್ವಜಂ ಡಮರುಗ-
27 ತೂರಿಯನಿರ್ಗ್ಘೋಷಣಂ ಪ್ರತಾಪಲಂಕೇಶ್ವರಂ ವೈರಿಭಕಂಠೀರವಂ ನಿಸ್ಸಂಕ-
28 ಮಲ್ಲಂ ಪರನಾರೀಸಹೋದರಂ ರಾಯರಾಜಾರ್ಯ್ಯ ಕನಿವಾರಸಿದ್ಧಿ ಗಿರಿದುರ್ಗ್ಗಮ-
29 ಲ್ಲ ಚಲದಂಕರಾಮ ನಿಕ್ಕಳಿನಾಮಾವಳೀವಿರಾಜಿತರಪ್ಪ ಶ್ರೀಮದಾಹವಮಲ್ಲದೇವ-
30 ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬ-
ಂತ್ರಮಿರೆಯುಂ ॥ ತತ್ಪಾದಪದ್ಮೋಪಜೀವಿಗಳುಮಪ್ಪ ಶ್ರೀ-

32 ಮನುಮಹಾಮಂಡಳೇಶ್ವರಂ ವೀರವಿಕ್ರಮಾದಿತ್ಯದೇವರಸರ ಪ್ರಭಾವೋಂನತಿಯೆಂ-
33 ತೆಂದಡೆ ॥ ವೃ ॥ ಸ್ವಸ್ತಿ ಸಮಸ್ತವಸ್ತುನಿಚಯಾ[ಂ]ನ್ವಿತವಾನತಭೂಭೃದಾಶ್ರಯಂ
34 ವಿಸ್ಮಿತಸೇವ್ಯಿತಾ[ವ]ನಿತಳಂ ಪೃಥುಸತ್ವಸಮಂನ್ವಿತಂ ನಿಜಾಪಾಸ್ತಖಳಬ್ರ-
35 ಜಾವಕಿರಮುಜ್ವಳಕೀರ್ತಿಸುಧಾಂಶುಸಂಭವಂ ಪ್ರಸ್ತುತವಾಯ್ತುವಿಕ್ರಮಸ್ರಿ-
36 ಪಾಳಕುಳಾಂಬುಧಿ ನಿತ್ಯಸುಸ್ಥಿತಂ ॥ ಶಿತಿಕಂಠಸ್ರಸ್ಪುರಚ್ಚಂದ್ರಕಕುಳಕಳಿ-
37 ಕೋತ್ತಂಸಕಂ ಶೋಣಗುಂಜಾಕ್ರಿತಮಾಳಾಲಂಬಲಂಬೂಷಕಘಟಿತ ಕಟೀ-
38 ಸೂತ್ರಕಂ ರಾಜಿಜಂಬೂಮಗತಚಂಚತುಪಲ್ಲವಾವೇಲ್ಲಿತಘನಜಘನಂ ಕ್ರೂರಕಾಂತಾರ[ದೊ]-
39 [ಳು] ಕೂಡೆ ತೊಳಲುಗುಂ ವಿಕ್ರಮಾದಿತ್ಯನೊಳುಜಿದಿಜಿದುದುವ್ರಿತ್ತವಿದ್ವಿಡುಕಳತ್ರಂ ॥ತ[ತ್ಪು]-
40 [ತ್ರ]ನಪ್ಪ ಶ್ರೀಮನುಮಹಾಮಂಡಳೇಶ್ವರಂ ಜೋಯಿದೇವರಸರ ಪ್ರಭಾವವೆಂ[ತೆಂ]-
41 [ದೆ]ಡೆ । ವೃ ॥ ಏಜಿಸಿ ಚಾಪಮಂ ತಿಜಿಪಿ ಕೂರ್ಗ್ಗಣೆಯಂ ನೆಜೆ ಹೂಡಿ ವಿಕ್ರಮಂದೋ-
42 ಜುದಡಬುಧಿ ಬತ್ತಿದುದು ರಾಮನ ಚಾಪ[ದ] ಬಲುಮೆ ಹೋಗದೆ ಮೀಜುವ ವೀರವೈರಿನರ-
43 ಪಾಳಬಳಾಂಬುಧಿ ಜೋಮ ಹು[ರ್ವ್ವ]ನೀನೇಜಿಸೆ ಬತ್ತಿ[ದ]ತ್ತು ನಿನಗಂ ರಘುಜಂಗವ[ದಾ]-
44 [ವ]ದಂತರ ॥ ಸಾಹಸದೊ[ಳು] ಧರಾಧರಧರಂ ಭುಜಶೌರ್ಯ್ಯನಿಜಪ್ರ[ತಾ]-
45 ಪಂದೋಹಮೊಳಬ್ಜನಂ ಬಳಿವಿರೋಧಿನೃಪಾಳಸಮಸ್ತಸೈ[ನಿ]ಕಬ್ಯೂಹವ—
46 ನಾವಗಂ ತವಿಪ [ಚಂ]ಡಪರಾಕ್ರಮನೆಂದಡೀ ರಣೋತ್ಸಾಹ ಜಯಾ[ಂಗ]-
47 ನಾನ[ಕ್ರ] ಜೋಮನೃಪಾಳನೆಂಬರಿದಿಚ್ಚರವರು ॥ ತತುಪುತ್ರನಪ್ಪ ಶ್ರೀಮನುಮ-
48 ಹಾಮಂಡಳೇಶ್ವರಂ ಕುಮಾರಂ ವೀರವಿಕ್ರಮಾದಿತ್ಯದೇವರಸರ ಪ್ರಭಾವವೆಂತೆಂ-
49 ದಡೆ ॥ ವೃ ॥ ಉರಗೇಂದ್ರ ಧಾತ್ರಿಯಂ ದಾರಿಣಿ ಹಿಮಗಿರಿಯಂ ಹೆಮ್ಮೆರ್ಶೈಳಂ ಕುಧಿ[1]-
50 ಜ್ಞಾ[ವ]ರನಂ ಗೌರೀವರ[ಂಚಂ]ದ್ರನನಮಳಿನ ಚಂದ್ರಂ ಕಳಾಸ್ತೋಮಮಂ ನಿರ್ಭ್ಭರದಿಂದಂ
51 ತಾಳ್ದುವಂತಪ್ರತಿಮರಿಪುಕುಳೋದ್ಭೂತಸಾಮ್ರಾಜ್ಯಲಕ್ಷ್ಮೀಭರಮಂ ಕೇಳಾಸು-
52 ಸಾಧ್ಯಂ ತನಗೆನೆ ತಳೆದಂ ವಿಕ್ರಮಾ[ದಿ]ತ್ಯಭೂಪಂ ॥ ೧ ॥ ತತ್ಪಾದಪದು-
53 ಮೋಪಜೀವಿಗಳುಮಪ್ಪ ಶ್ರೀಮನುಮಹಾಪ್ರಧಾನಂ ಸರ್ಬ್ಬಾಧಿಕಾರಿ ಶ್ರೀಕರ-
54 ಣಂ ಸೇನಾಧಿಪತಿ ಬಾಹತ್ತರನಿಯೋಗಾಧಿಪತಿ ಲಾಳಕ[ಡೆ]ಯಕಾಜಿರಧಿಷ್ಠಾಯಕಂ
55 ಮಹಾಪ್ರಚಂಡದಂಡನಾಯಕಂ ವಾಸುದೇವನಾಯಕರ ಪ್ರಭಾವವೆಂತೆಂದಡೆ ॥ ವೃ ॥ ಅ-
56 ನುಪಮದಾನದಿ[ಂ]ದು ಮಹಿಮೋಂನತಿಯಿಂ ಹೆಜತೇನನೆಂಬೆನೊಳ್ಪಿನಕಣಿ ದಾನಮಾನನಿಧಿ
57 ಸಮಪಿನಯಾಂಬುಧಿ ದಂಡನಾಥವಾಸುಗಿಗೆಣೆಯಪ್ಪ[ನೆಂ]ಬವನದೇಂ ಬಲಿಯೋ ಶಿ-
58 ಬಿಯೋ ದಧೀಚಿಯೋ ದಿನಪತನೂಜನೋ ಖೇಚರರಾಜನೋ ಗುತ್ತನೋ ಚಾರುದತ್ತನೋ
॥ ಕಂ ॥ತುರಗಾ-
59 ರೂಢಪ್ರೌಢಿಗೆ ದೊರೆಯಾರು ವಿಗ್ರಹವಿನೋದದೊಳು ಜೋಮಮಹೀಶ್ವರಮಂತ್ರಿ ವಾಸು
ದೇವಂಗ[ರಿ]ದಿ-
60 ರುದದುರ್ವ್ವಷ್ಟತುರಗ[ರಾವುತರಾಯ] ॥ವೃ ॥ ಸ್ಥಿರತೇಜಂ ಪುಣ್ಯಪುಂಜಂ ಸುಜನಜನಮನೋಜಂ
ಯಶಃಶ್ರೀ-
61 ಸಮಾಜಂ ಧರೆಗೆಲ್ಲಂ ತಾನೆ ನಲ್ಲಂ ಸೆಣಸುವ ರಿಪುಕ್ಷತ್ರಿಯಲ್ಲ . . . . . . . . ಧುರ-
62 ಧೀರಂ ನಿರ್ವ್ವಿಕಾರಂ ದುರಿತವಿದೂರಂ ಸದಾಚಾರಸಾರಂ ॥ ಕ . . . . . .
ಯಸಾ . . . . . [ಸ]ಮ [ರ]ಮು-
63 ಖದಶಗ್ರೀವನುದ್ಯತುಪ್ರಭಾವಂ॥ ಕ ॥ ಮಾಡಿದ ಪಾಪಂ ಶಿವನನೋಡಲೊಡಂ ಕೆಡುಗು . . .
ಗುಣಹೀನನುಮಂ ಬೇ-
64 ಡಿದ ಪಾಪಂ ಕೆಡುಗುಂ ಬೇಡಲೊಡಂ ವಾಸುದೇವದಂಡಾಧಿಪನಂ॥ . . . . . .
ನಪ್ಪ ಕೇಶವ-

---

1 Mistake for ಧ.

65 ದಂಡನಾಯಕನ ಪ್ರಭಾವವೆಂತೆಂದಡೆ ॥ ಅಸಿಧಾರಾ . . . . . . . ದರಹಿತಮಹೀ ಪಾಳ . . . . . . . . . . ಚಂ–
66 ದ್ರಾತಪಶ್ರೀಗೆಣೆಯೆನೆ ನೆಱೆ ಪೆರ್ಬ್ಬಿದ ಸತುಕೀರ್ತ್ತಿ . . . . . . . . ರಾದಿತ್ಯ
67 ಕೇಶಿರಾಜಂಗೆ ಸಹಾಯೋದ್ಯ . . . ಶೌರ್ಯ್ಯಂ . . . . . . . . . ಜನ . .
68 ತಂ ಎವೇಕನಿಧಿ ಸಚ್ಚರಿತಾಶ್ರಯನಾತ್ಮವಂಶ . . . . . . . . . . . ಪುಣ್ಯಭಾಜನೆ
69 ನೆನವದ್ಯನೆಂದು ಧರೆಬಣ್ಣ . . ದೊಳೆಯ್ದೆ ಕೇಸಿ . . . . ಗುಣ . . . . . . . . .
70 ೋ ತದನುಜನಪ್ಪ ನಾರಣದಣ್ನಾಯಕರ [ಪ್ರಭಾವ]ವೆಂತೆಂದಡೆ . . . . . . . . . . . ದೊ–
71 ಡ್ಡ ನೆಂದರಿಬಳಪ್ರಾತ . . . . . . . . . . . . ತಕ್ಕವೊಲಾದವನಿ[ಪಾ] . . . . . . . . .
72 ನೀ ನಾರಣದೇವನಾಂತಿಱಿ ಯು[ದ್ಧ]ದೊಲು ಸಾ . . . . . . . ಲಪಾ ಹರಿಪುತ್ರಂ . . . . . .
73 ಸುತಂ ತಾನೆಂದಡೇವದಿಣ್ಣಪೆಂ ॥ ಕಂ ॥ ತುರಗ [ರೆ] . . . . . . . . . . ಬಿರುದ [ಸಿ] . . . . . . . .
74 ದವೆ ತಾ . . . ರಚ್ಚೆಯ ಹೆಕ್ಕಣದಿಂ ಕರಮೆಸೆದುದು ನರಪನಿ . . ವೀರಸಂಗರ . . . . ನಿಕ್ಷು–
75 ಹಾಪದ ಬಲಮಿಲ್ಲದೆ ನಿಱಿ ವಿಳಾಸಗರ್ಬ್ಬದ ಬಲದಿಂ ಲಲನೆಯು[ರ್ಗೆ ನಾರ] . . ರಾಜ ಕಲಿಯುಗ ಮದನಂ ವಿವೇಕ–
76 ಲಕ್ಷ್ಮೀನದನ[ಂ] ॥ ೋಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನುಮಹಾಮಂಡಳೇಶ್ವರಂ ಹಿರಿಯ–
77 ವಿಕ್ರಮಾದಿತ್ಯದೇವರಸರುಂ । ತತ್ಪುತ್ರನಪ್ಪ ಶ್ರೀಮನುಮಹಾಮಂಡಳೇಶ್ವರ
78 ಜೋಯಿದೇವರಸರುಂ ಕೂಡಿದುದ್ದಾನುರಾಗದಿಂದ ವಾಸುದೇವದಂಡನಾಯಕ[ರ್ಗ್ಗೆ]
79 ಬಿಂನವೊರ ಹನೆರೆಡಱ ಬಳಿಯ ಬಾಡದಾಲೂರುಮಂ ಸರ್ಬ್ಬನಮಸ್ಯವಾಗಿ ಧಾರಾಪೂ–
80 ರ್ಬ್ಬಕಂ ಮಾಡಿ ಕೊಟ್ಟಡದಂ ಪಂಮಪ್ರೀತಿಯಿಂ ಕೈಕೊಂಡಾ ಪೂರ ಶ್ರೀಮಲ್ಲಿಕಾರ್ಜ್ಜುನ–
81 ದೇವರ ದೇವಾಲಯದ ಜೀರ್ಣ್ನೋದ್ಧಾರವಂ ಸಿಪ್ಪಿಯಾದಿಯಾಗಿ ಕಲುವೆಸನಂ ಪುನರ್ಬ್ಬರಣ–
82 ವಾಗಿ ಸ ಪ್ರತಿಷ್ಠಿತಂ ಮಾಡಿ ಯಾದೇವರ್ಗ್ಗೆ ಯಂಗಭೋಗ ರಂಗಭೋಗ ನಿತ್ಯಪೂಜೆ ನೈ
83 ವೇದ್ಯ ನಂದಾದೀವಿಗೆ ಚೈತ್ರಪವಿತ್ರವಿಂತಿನಿತುಮಂ ಲೇಸಾ[ಗ]ಯೂರ್ಜಿತಂ ಮಾಡಿ ನ[ಡ] –
84 ಯುತವಂತಾಗಿ । ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾನು–
85 ಷ್ಠಾನಜಪಸಮಾಧಿಶೀಲಗುಣಸಂಪಂನರುಂ ಸಕಲಸದಾಚಾರಪರಿಪಾಲನೈ–
86 ಕರಸಿಕರುಂ ನಿಖಿಳಾಗಮಾರ್ತ್ಥಶಾಸ್ತ್ರತತ್ವವಿಶಾರದರುಮಪ್ಪ ಸೋಮೇಶ್ವರಪಂಡಿತ–
87 ರ್ಗ್ಗೆಸ್ಥಾನಾಚಾರ್ಯ್ಯತ್ವಮಂ ಸುಪ್ರತಿಷ್ಠಿತಂ ಮಾಡಿಕೊಟ್ಟು ಶಕವರುಷ ೧೧೦[೪]ನೆ–
88 ಯ ಶುಭಕೃತ್ಸಂವತ್ಸರದ ಮಾರ್ಗ್ಗಶಿರ ಸುದ್ಧ ಪೌರ್ಣ್ನಮಿ ಬೃಹಸ್ಪತಿವಾ[ರ ಸೋ]–
89 ಮ[ಗ್ರ]ಹಣ ವುತ್ತರಾಯಣಸಂಕ್ರಮಣ ವ್ಯತೀಪಾತಂ ಕೂಡಿಬ . . .
90 [ಹಾ]ಪುಣ್ಯತಿಥಿಯಲ್ಲಿ ಶ್ರೀಮಲ್ಲಿಕಾರ್ಜುನದೇವರ್ಗ್ಗೆ ಧಾರಾಪೂರ್ಬ್ಬಕಂ ಮಾಡಿಬಿಟ್ಟ ಭೂಮಿ . . .
91 ರಿಂದ[ವೀಸಾ]ನ್ತದಲು ಕೆಱೆಯ ಬಡಗಣ ಕೋಡಿಯಿಂ ಮೂಡಲು ಯೆರೆಯಭೂ .
92 ಮತ್ತರೈಯ್ದಂ ಮೂಲಸ್ಥಾನದ ದೇವರ್ಗ್ಗಂ ತಕ್ಕಲು ಮಕ್ಕಿ ಮತ್ತರು ನಾಲುಕು । ಹಿರಿಯ ಬಂ . .
93 ಲೊಳಗಾಗಿಯುತ್ತರಾದ ಸ್ಥಳದಲಿ ಗದೆ ಕಮ್ಮ ಮೂವತ್ತು . . . ೦ದ ಬಡಗ–
94 ಲು ಹಳೆಯ ಹಾಳು ಮೂಲಸ್ಥಾ[ನದಲ್ಲಿ] ಕಲದೇವರಿಗೆ [ಬಿಟ್ಟ] ಭೂಮಿ ಶ್ರೀಮ–
95 ಲ್ಲಿಕಾರ್ಜ್ಜುನದೇವ . . ರೆಯ ಸಮೀಪದಲು ಯೆ[ರೆಮ]ತ್ತರೆರಡು । ಮಲ್ಲಿಕಾರ್ಜ್ಜುನದೇ . . . ಮ–

96 ಕ್ಕಿಯ ಸಾ . . . . ಮತ್ತರೊ[೦]ದು । ಮಲ್ಲಿಕಾರ್ಜುನದೇವರ ಗದ್ದೆಯ ಸಮೀಪದಲು . . . . . . . .

97 ಸ್ವಸ್ತಿ ಯಮನಿಯಮ . . . . . . . . [ಧಾರಣ]ಮೋನಾನುಷ್ಠಾನಜಪಸಮಾಧಿಶೀ . . . ಸ[೦]-

98 ಪಂನರುಂ . . . . . . . . . ಪಾಸನಾಗ್ನಿಹೋತ್ರ ದೇವಾ . . . . . . . .

99 . . . . . . . . ಮನ್ಮಹಾಜನ . . . . . . . . . .

100 }
101 } Damaged

102 [ಗ] . . . . . ಬೈಕೇರಿ . . . . . . ಪಡುವ . . . . . . . . . .

103 . . . ವಿಯ . . . . . . . . . . . . ಹಡುವಲು . . . . . . . . . . .

104 ಲ . ದಿಯಾಗಿ . . . . ಮ[ತ್ತ] . . . . . . [ಯಿ]ದಜೊ . . . . ಕೇಶವದೇವರ್ಗ್ಗೆರೆಮ[ತ್ತ]ರೆ-

105 ರಡು । . ದಹೊಳಗೆರೆಯ . . . . . . . . ಮತ್ತರೆ . . . ಸತ್ರಕ್ಕೆರೆಮ-

106 ತ್ತರೆರಡು ॥ ಚಿಕ್ಕಬಯಲೊಳಗೆ . . . . . . . . ಗದ್ದೆ ಮತ್ತರೆರಡು । ಯದಜೊಳಗೆ

107 ಶ್ರೀಕೇಶವದೇವರಿಗೆ ಗದ್ದೆಕಂಮ ಹದಿನಯ್ದು . . ಳ ಮಹಾಶ್ರೀ ॥ ◎ ॥ ಸ್ವದತ್ತಾಂ

108 ಪರದತ್ತಾಂ ವಾ ಯೋ ಹರೇತ ವಸುಂಧರಾಂ . . . . ರುಷಸಹಸ್ರಾಣಿ ವಿಷ್ಠಾಯಾಂ

109 ಜಾಯತೇ ಕ್ರಿಮಿಃ । ಕೋಟಿ ಪಯಂಗವಿರೆಯನಿಕ್ಕೋಟಿ ತಪೋಧನರ ವೇದವಿದರಂ

110 ಹಂನಿಕ್ಕೋಟಿಯನಿಕ್ಕೋಟಿ ತೀರ್ತ್ಥದೆ ಕೋಟಿ ಮಹಾದಿನದೊಳ . . ನಿಂತಿದನಳಿದಂ ॥ ಓಂ ನಮಶ್ಶಿವಾಯ ॥

111 ◎ ಹಡಗಿರೆಯ ದಾಸೋಜನ ಮಗ ಕಲ್ಲೋಜನ ಬರಪಮಿದಾಚಂದ್ರಾರ್ಕ್ಕತಾರಂಬರಂ ಸಲುಗೆ॥

## THE HOYSALAS

### No. 193

*(B. K. No. 12 of 1934-35)*

BILHAḶḶI, RANEBENNUR TALUK, DHARWAR DISTRICT

*Hero-stone set up in the temple of Kallēśvara*

**Vira-Ballāḷa II—A.D. 1187-88**

This inscription is dated in the **16th regnal year of Vira-Ballāḷadēva, Plavaṅga,** which corresponds to **A.D. 1187-88.** Further details of the date are lost. It records the death of **Dāsōja,** son of the goldsmith **[Sō]vōja,** in a cattle-raid and registers a gift of land by some *Gauḍas* for the hero-stone set up by his brothers **Masaḷōja** and **Kētōja.** The record is damaged.

**Text**

*First Panel*

1 ◎ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ನೊಳಂಬವಾಡಿದ ಬಿಟಿಹಳ್ಳಿಯ ಭುಜಬಲ-

2 ಪಾಂಡ್ಯರಸನು [ಪ್ರತಾಪಚಕ್ರವರ್ತ್ತಿ ಯಾದವ]ನಾರಾಯಣಂ ವೀರಬಲ್ಲಾಳದೇವ[ವ*]ರ್ಷ-

3 ದ ೧೬ ಪ್ಲವಂಗ . . . . . . . . . ವಾರದಂದು ಬಂದಣಿಕೆಯ [ವೇ]-
4 ಕ್ಕ ಬಿಲ್ಲವ[ಳ] . . . . . . . . . ರುವಂ ಕಾಯ್ದು

*Second Panel*

5 ತುರುವಂ ಮಗುಳ್ಚಿ ಅಕಸಾಲ [ಸೋ]ವೋಜನ ಮಗಂ ದಾಸೋಜನಿ[ರು*]ದು ಸತ್ತು ಸುರಲೋಕ ಪ್ರಾಪ್ತನಾ[ದ]
6 ಕಲ್ಲಂ ನಿಲಿಸಿ[1]ದರಾತನ ತಂಮಂದಿರು ಮಸಣೋಜ ಕೇತೋಜ ಆತನ ಬೀರಗಲ್ಲಿಗೆ ಕಾಮ[ಗವು]ಡನ ಮಗಂ
7 ಬಿಟಗಾವುಡ ಉತ್ತಗಾವುಡ ಕೊಟ ಅರವೆ ಕೆ[೦]ಗಲು ಕ ೫೦ ನಿಡುಗೆಱೆಯ ಕೆಳಗೆಗದೆ ಕ೬ಮಂ ನಲಿಸುವರು ॥

## No. 194

(*B. K. No. 93 of 1933-34*)

HONNATTI, RANEBENNUR TALUK, DHARWAR DISTRICT

*Slab lying in the temple of Nārāyaṇadēva*

**Vira-Ballāḷa II—A.D. 1197**

This inscription is dated in the **[7]th regnal year** of **Vira-Ballāḷadēva, Piṅgaḷa Pushya śu. [2], U[ttarā]yana-saṁkrmaṇa, Sunday**. The date is irregular. On the *tithi* given the week-day was Friday which corresponded to **A.D.** 1197, December 12. **Ba. 2** of this month however was Sunday, 28th December 1197, and the *Uttarāyana-saṁkramaṇa* had occured on the 25th. It records the gift of an oil-mill and a house-site by **Pōlāḷva-Daṇḍanāyaka** and Rājādhyaksha **Dāvaṇṇa** to the temple of **Kēśvadēva** of Honnavatti.

**Text**

1 ® ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ
2 ತ್ರೈಲೋಕ್ಯನಗರಾರಂಭಮೂಲಸ್ತಂಭಾಯ
3 ಸಂಭವೇ ॥ ಸ್ವಸ್ತಿ ಶ್ರೀ ವೀರಬಲ್ಲಾಳದೇವವ-
4 ರ್ಷದ[೭]ನೆಯ [ಪಿಂಗಲ]ಸಂವತ್ಸರದ ಪುಶ್ಯ ಸು[೨] ಆ
5 ಉ[ತ್ತರಾ]ಯಣಸಂಕ್ರಾಂತಿ [ವ್ಯತೀಪಾತದ]ಂದು ಶ್ರೀ-
6 [ಮತು] ಸತ್ಯರಾ[ಧೇ]ಯಂ [ಪೋಲಾ]ಳ್ವದಣ್ಣನಾಯ-
7 ಕರು ಶ್ರೀಮ[ತು] ರಾಜಾಧ್ಯಕ್ಷ ದಾವಂಣ್ಣಂಗಳು
8 ಹೊಂನವತ್ತಿಯ ಶ್ರೀಕೇಶವದೇವರ್ಗ್ಗೆ ನನ್ದಾದೀವಿ-
9 ಗೆಗೆ ಸಭಾ[ಮಂಟಪದಿಂ] ತೆಂಕಲು ಸರ್ವ್ವ-
10 ನಮಸ್ಯವಾಗಿ ಕೊಟ್ಟ ಗಾಣ ಒಂನ್ದು ಆ ನಿ[ವೇ]ಶಣ
11 ವೊಂದು ಇ ಧರ್ಮ್ಮವಂ ಸ್ವಧರ್ಮ್ಮದಿಂ ಪ್ರತಿ-
12 ಪಾಳಿಸುವದು ಇದಕಾರಾನಂ ಅಂ-
13 ನ್ಯಾಯವಂ ಚಿನ್ತಿಸಿದವರು ವಾರಣಾಸಿ ಕುರು-
14 ಕ್ಷೇತ್ರದಲು ಕವಿಲೆ ಬ್ರಾಹ್ಮಣ ಮಾತಾ-
15 ಪಿತೃಗಳಂ ಸ್ವಹಸ್ತದಿಂದಳಿದವರು ।

---

1 The letter ಸಿ is written above the line in smaller character.

## No. 195

(*B. K. No. 7 of 1934-35*)

BENAKANKONDA, RANEBENNUR TALUK, DHARWAR DISTRICT

*Slab set up near the southern entrance of the Kalamēśvara temple*

### Vira-Ballāḷa II—A. D. 1202

This inscription is dated in the **13th year** of the reign of **Vira-Ballāḷadēva, Dundubhi, Vaiśākha śu. 15, Monday, Saṅkrānti**. Palaeographically the record may be assigned roughly to the 12th century A. D. and hence the Ballāḷa of this record may be identified with Ballāḷa II. In his reign the cyclic year Dundubhi corresponds to A. D. 1202-3. In that year the given details correspond to **A. D. 1202, April 8, Monday f.d.t. ·06**. The month was *Adhika Vaiśakha.*

It registers a grant of land and house-site made by the **Prabhu** of **Beḷugali** and others to **Chauḍeya-Nāyaka** and others for effecting repairs to the tank of **Harakaṭa**. The grant was made during the time of **KumāraVira-Vikramāditya**, the son of *Mahāmaṇḍalēśvara* **Jagadāḷa Chaṭṭamadēva**. The land-measure *Gaṅgana-ghaḷe* is mentioned.

The record, which contains many scribal errors has been engraved very carelessly.

### Text [1]

1 ⊚ ನಮಃಸ್ತುಂಗಶಿರಸ್ತುಂಬಿಚಂದ್ರಚಾಮರಚಾರವೇ ತ್ರೈಳೋ-
2 ಕ್ಯನಗರಾರಂಭಮೂಲಸ್ತಂಭಾಯ ಸಂಭವೇ ವರಘೇನಾನೇ-
3 ಕಸುಂಭದುಬಹಳತರತರಂಗಳೊಂದೊಂದನೊಂದಂ ಭರ-
4 ದಿಂದಂ ತಳ್ಪೊಯ್ಯ ಮೇಲಂಗೊಗೆದು ಪೊಳೆವ ಸೀಮ್ಮೂರ್ತ್ತಿವೆಂಬಂತೆ
5 ಸೂಸುತಿರೆ ಪೋಱೊಂತ್ತುರ್ದ್ದ ತೂಪ್ರ್ಪನಿಗಳಸದಳಂ ಚೆಲುವನಾಳ್ವತ್ತು ಕೂ-
6 ವೊರ್ೞ್ದುರಪಾರೀನಾದಿಧಾನ್ಯದುಗಳಗಳತಗುಣಧ್ಯಾನರೌದ್ರಂ ಸಮುದ್ರಂ ॥
7 ಅಂತೆನಿವ ಕುಂತಳೋರ್ವ್ವೀಕಾಂತೆಗೆ ಪತಿಯೆನಿಸಿ ವೈರಿನ್ರಿಪಕುಳವಿಳಯೋ-
8 ಗ್ರಾಂತಕನೆಸೆದಂ ದೋರ್ವ್ವಳಕಾಂತೇಯಂ ಬಲ್ಲಾಳದೇವನೂರ್ಜ್ಜಿತತೇಜ ॥ ವಚನ
9 ತಕುಪಾದಪದುಪೋಪಜೀವಿಗಳುಮಪ ಶ್ರೀಮತುಮಹಮಂಡ್ಡಳೇಸ್ವರಂ ಜಗ-
10 ದಾಳ ಚಟ್ಟಮದೇವನ ಪ್ರಧಾಪೋಂನತಿಯೆಂತ[ಂದ*]ಡೆ ॥ ಸಾಹಸದೊಳು ಧರಾಧರಧ-
11 ರಂ ಭುಜಸೌರ್ಯ್ಯನಿಜಪ್ರತಾಪಸಂದೋಹದೊಳರ್ಜುನಂ ಬಳವಿರೋಧಿನ್ರಿಪಾಳಸಮ-
12 ಸ್ತಸೈಂನ್ಯಸಟ್ಟುಹಮನಾವಗಂ ತವಿಪಚ್ಯಂಣ್ಯಪರಾಕ್ರಮಪೆಂದಡೀ ರಣೋಶ್ಸಾ-
13 ಹ ಜಯಾಂಗನಾಸಕ್ತ ಚಟ್ಟನ್ರಿಪಾಳನೊಳಾರಿದಿ[2]ರ್ಚ್ಚುವರು ॥ ತತ್ಪುತ್ರನಂಪ
14 ಶ್ರೀಮನುಮಹಾಮಣ್ಡಳೇಸ್ವರಂ ಕುಮಾರ ವೀರವಿಕ್ರಮದಿತ್ಯದೇವರಸರ ಪ್ರಧಾಪೋ-
15 ನತಿಯೆಂತ್ತೆಂದಡೆ ॥ ಯಲರಂಬಿ ಇಕ್ಷುಚಾಪದ ಬಲಮಿಲ್ಲದೆ ನಿಜವಿಳಾಸಗರ್ಬ್ಬ-
16 ದ ಬಲದಿಂ ಲಲನೆಯರ್ಗ್ಗೆ ವಿಕ್ರಮಾಂಕಂ ಕಲಿಯುಗಮದನಂ ವಿವೇಕಲಕ್ಷ್ಮೀಸದನನು ॥
17 ಯೆಲೆ ಮರುಳೆ ಪುಲಿಯ ಮೀಸೆಯನೊಲದುಯ್ಯಲನಾಡುವಂತ್ತೆ ಬೊಪ್ಪನಿ-
18 ಪಾಳಂಗಲಗಣಸು ಸೆಣಸುಗಿಣಸೆಂದುಲುಕುವ ಮಂಡ್ಡಳಿಕರೊಳ್-

---

1 The text is corrupt. It is given as it is.

2 ದ is written above the line.

19 [ರೆ] ಭೂಮಣ್ಡಲದೊಳು ॥ ಜಗದೊಳಗತ್ಯಪೂರ್ವ್ವದಿತವೇಂ ದಿಟ ಯಾವು-
20 ದು ಸ್ವಾಮಿಕೀರ್ತ್ತಿ ಯೀ ಯುಗದೊಳ್ಗೆ ಮೂರ್ತ್ತಿಗೊಂಡೆಸೆವ ಗಣ್ಡಮಾಕೀರ್ತ್ತಿ-
21 ವಾಗಿ ಕೈ ಮುಗಿಯಲುವೇಡ ಬಣ್ಣಿಸಲುವೇಡ ನೀಂ ನಗುತ ಸರಣ್ಯನಂ ಬಗದು
22 ಬೇಳ್ಪದನೀವನು ದಾಸಿವರ್ಮ್ಮನು ॥ ಸ್ಥಿರತೇಜಂ ಪುಣ್ಣ್ಯಪುಂಜಂ ಸುಜನಜನಮ-
23 ನೋಜಂ ಯಸಃಶ್ರೀಸಮಾಜಂ ಧರೆಗೆಲಂ ತಾನೆ ನಲ್ಲಂ ಕರೆದೀವಂ **ಆಲಿಮುರೊಡೆಯಂ**
24 ಸಮರಮುಖದಸಗ್ರೀವನುದ್ಯತಪ್ರಭಾವ ॥ ತುರಗಾರೂಢಪ್ರೌಢಿಗೆ ದೊರೆ ಯಾರು
25 ವಿಗ್ರಹವಿನೋದದೊಳು ದಾನವಿನೋದಿಯದಿರಾಜನನಭಿವರ್ಣ್ಣಕುಂ ದಿನಪತೇಜ-
26 ನನಾಸ್ರಿತಕಲ್ಪಭೂಜನಂ ॥ ಮನುಚರಿತಂ ಚರಿತ್ರವಿನುಜಾತನ ನಂನಿಯೆ ನಂನಿ ಧ-
27 ರ್ಮ್ಮನಂದನನ ಗುಣಂ ಗುಣಂ ದಿವಿಜಮಂತ್ರಿಯ ಮಂತ್ರವೆ ಮಂತ್ರವಂಜನಾತನೆ-
28 ಯನುದಗ್ರಸಾಹಸವೆ ಸಾಹಸವೆಂದು ಧರಿತ್ರಿ ಮಲ್ಲರಾಜನಭಿವರ್ಣ್ಣಕುಂ
29 ದಿನಪತೇಜನನಾಶ್ರಿತಕಲ್ಪ(ರ್)ಭೂಜನಂ ॥ ಅನಾ ಪ್ರಭುಗಳುಂ ಹನ್ನಿಹಿಟ್ಟುಂ ಸಮಸ್ತ
30 ಪ್ರಜೆಗಳುಂ ಕ್ಷೀರೋದಿಕರಾಗಿ ಧರ್ಮ್ಮಮಂ ಯುಧರಿಪಲು ಚೌಡೆಯನಾಯಕಂಗೂ-
31 ಡಿ ತಮ್ಮಮುವರ್ಗ್ಗೆ ಹೇಳರೆಂತ್ತಂ[द*]ಡೆ ॥ ವಿತ್ತಂ ವೀರಂ ವಿಜಯಾದಿತ್ಯಂ ನಂದವನಿಯೊಳಗೆ ಮುಂ-
32 ನಿನ ವಿಟರಂಕಿತ್ತುದನೀಯಲು ದೇವಣನೊತ್ತಂಬದ ಗಣ್ಡನೆಂದು ನುಡಿಯುದು ಲೋಕ ॥
33 ವನಚನ ಚರನ ಚರಿತವೆನಿಸಿದ ವಿನತೆಯ ಸುತನಂತೆ ಭೂವಿಯೊಡೆಯರ ಮನಮಂ
34 ಪಿಡಿಯಚ್ಚುವಿಡಿಯೆ ಚೌಡೆಯನದನವಧಾರಿಸಿ ಮನೋನುರಾಗದಿನಿತ್ತರು ॥
35 ರಣರಂಗ ವಿಜಯನೆನಿಸಿದ ಧನುವಿದ್ಯೆಯೊಳಗ್ರಜನೆನಿಸಿದ ವನಿತಾನಿವಹದೊಳು
36 ಸೊಬಗನೆನಿಸಿದ ಗುಣ ರಲ್ಲಯನಾಯಕಂಗೆ ಸಮನೆನರೊಳರೇ ॥ ಭುಜಬಲದ ಕಲಿ ಸಮಂ-
37 [ನ್ಮಥ]ನಿಜತೇಜದ ಮೂರ್ತ್ತಿಯೆಂದು ಪೊಗಳ್ವುದು ಲೋಕಂ ಸೊಬಗಿನೊಳು ಕಾಮನೆ-
38 ನಿಸಿದ ಬುಧ ಕಾಚಯನಾಯಕಂಗೆ ಸಮನೆನರೊಳರೇ ಸ್ವಸ್ತಿ ಶ್ರೀಮತು ಪ್ರ-
39 ತಾಪಚಕ್ರವರ್ತ್ತಿ **ವೀರಬಲ್ಲಾಳದೇವವರ್ಷದ ೧೩ ನೆ ದುಂದುಭಿಸಂವತ್ಸರದ ವೈಶಾಖ ಸು ಪೌ-**
40 **ರ್ಣ್ಣಮಿ । ಸೋ ಸಂಕ್ರಾಂತಿ ಬ್ಯತೀಪಾತ ಕೂಡಿದ ಪುಣ್ಯದಿನದಂದು ಬೆಳುಗಲಿಯ ಪ್ರಭು** ದಾಸಿ
41 [ಮೊ]ರೊಡೆಯ ಆಲಿಮೂರೊಡೆಯ ಮಲ್ಲೂರೊಡೆಯ ಆದಿಮೂರೊಡೆಯ ಹಂನ್ನಿಹಿಟ್ಟು ಮುಖ್ಯವಾ-
42 ಗಿ । ಚೌಡೆಯನಾಯಕ ಕಾಚೆಯನಾಯಕ ರಲ್ಲೆಯನಾಯಕನ ನೊಭಾಗಕ್ಕೆ ಮೈದುನ ಲಕ್ಕನೊಡೆಯ
43 ಯಿನ್ತಿವರ್ಗ್ಗೆ ಹರಕಟದ ಕೆಱೆಯ ಚಂದ್ರಾರ್ಕ್ಕಸ್ಥಾರಂಬರಂ ಬಲಿಷ್ಠಮಾಡುವಂತಾಗಿ ಚಿಕೆರೆಯೊಳ-
44 ಗೆ ಗಂಗನ ಪಳಿಯಲು ಮತ್ತರು ಮೂಱು ಆ ಪಳಿಯಲು ಕೆಱೆಕೆಳಗೆ ಗದ್ದೆ ಕಂಬಂ ೩೦ ಪೆ-
45 ರ ನಡುವೆ ಮೂವತ್ತು ಕೆಯ್ಯ ಮನೆಯುಮಂ ಯಿತ್ತೀ ಮಾನ್ಯಮಂ ಸರ್ವ್ವಬಾಧೆಪರಿಹರವಾಗಿ
46 ಚಂದ್ರಾರ್ಕ್ಕತಾರಂಬರಂ ಸಲಿಸುತ್ತಿರಲನಂತ್ತ ಫಲ ಯಿ ಧರ್ಮ್ಮಮನಾವನಾದಡೆಯಳಿ[द*]ಡೆ
47 ಸ್ವದತ್ತಂ ಪರದತ್ತಂ ವಾ ಹ್ಯೋ ಹರತಿ ವಸುಂಧರಾ ಷಷ್ಟಿರ್ವ್ವರುಷ ಸಹ-
48 ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ ॥

## No. 196

(*B. K. No. 88 of 1932–33*)

HĀVĒRI, HAVERI TALUK, DHARWAR DISTRICT

*East beam in the Navaraṅga-maṇṭapa in the Siddhēśvara temple*

**Vīrā–Ballāla II– A. D. 1207**

This inscription is dated in the cyclic year **Prabhava of the reign of Vira–Ballāḷa, Vaiśākha ba. 8, Saturday.** On paleographic grounds the present record may be assigned

to the reign of Vīra-Ballāḷa II. In his reign the details correspond regularly to **A. D. 1207, April 21, Saturday.** It records the gift of money made by **Surigeya Pirumāḷeyaṇṇa,** son of *Mahāpradhāna, Sarvādhikāri* and *Mahāpasāytā* **Oḍeyaṇṇa,** the sword-bearer, for burning a perpetual lamp to god **Siddhanāthadēva.** The gift was entrusted to **Gaḷatigeya Mallis-eṭṭi,** in the presence of the devotees and the **Four-hundred** (*Mahājanas*). A supplementary grant made for the same purpose and to the same person by **Heggaḍe Vaijayya** has also been recorded.

### Text

1 ◎ ಸ್ವಸ್ತಿ ಶ್ರೀಮತುಪ್ರತಾಪಚಕ್ರವರ್ತ್ತಿ ಯಾದವನಾರಾಯಣಂ ವೀರಬಲ್ಲಾಳದೇವವರ್ಷದ
ಪ್ರಭವಸ[ಂ]ವತ್ಸರದ ವೈಶಾಖ ಬಹುಳ ೮ ವಡ್ಡವಾರದಂದು ಶ್ರೀಮನ್ಮಹಾಪ್ರಧಾನಂ
ಸರ್ವ್ವಾಧಿಕಾರಿ ಮಹಾಪಸಾಯ್ತಂ ಪರಮವಿಶ್ವಾಸಿ ಸುರಿಗೆ-

2 ಯಾಳೊಡೆಯಣ್ಣನ ಪುತ್ರಂ ಸಮಸ್ತಗುಣವಿಶೇಶೋಂನತನಪ್ಪ ಶ್ರೀಸಿದ್ಧನಾಥದೇವರ ಪುತ್ರಂ
ಸುರಿಗೆಯ ಪಿರುಮಾಳೆಯಣ್ಣನು ಶ್ರೀಸಿದ್ಧನಾಥದೇವರ ಅಖಣ್ಡದೀಪಕ್ಕೆ ದಿನಂಪ್ರತಿ ಎಣ್ಣೆ
ಸೊಳಸವೊಂದಱ ಲೆಕ್ಕದಿಂದಾಚಂದ್ರಾರ್ಕ್ಕಸ್ಥಾಯಿಯಾಗಿ ಕಿಡ-

3 ದೆ ನಡೆಸುವಂತಾಗಿ ಕೊಟ್ಟ ಗದ್ಯಾಣವಯ್ದುಱ ಕಳಾನ್ತರದಿಂ ವರಿಶಕ್ಕೆ ಗದ್ಯಾಣವೊಂದು ಪಣವಯ್ದುಱುಂ
ಗಳತಿಗೆಯ ಮಲ್ಲಿಸೆಟ್ಟಿಯ ಕಯ್ಯಲು ಸಮಸ್ತ ಭಕ್ತರುಮಂ ನಾನೂರ್ವ್ವರುಮಂ ನೆರಪಿಯವರ
ಸನ್ನಿಧಾನದಲು ಕೊಟ್ಟ ಧರ್ಮ್ಮವಂ ನಾನೂ-

4 ರ್ವ್ವರು ಕಿಡಲೀಯದೆ ನಡಸುವರು ಸುರಿಗೆಯ ಪಿರುಮಾಳೆಯಣ್ಣನಂ ಸಿದ್ಧನಾಥದೇವರು ಆಚಂದ್ರಾ
ರ್ಕ್ಕತಾರಂಬರಂ ರಕ್ಷಿಸುವರು ಮಂಗಳ ಮಹಾಶ್ರೀ ಶ್ರೀ ಶ್ರೀ ಹೆಗ್ಗಡೆ ವೈಜಯ್ಯನು ಸಿದ್ಧನಾಥ
ದೇವರ ನಂದಾದೀವಿಗೆಗೆ ಮ[ಲ್ಲಿ]ಸೆಟ್ಟಿಯ ಕಯ್ಯಲು ಗದ್ಯಾಣಂ

5 ಮೂಱು ಕಳಾ(ಂ)ನ್ತರದಿಂ ವರಿಸಕ್ಕೆ ಪಣ [ಒಂ]ಭತ್ತುಮಂ ಸಮಸ್ತ ಭಕ್ತರುಂ ನಾನೂರ್ವ್ವರುಂ
ತಪ್ಪದೆ ನಡಸುವರು ಮಂಗಳ ಮಹಶ್ರೀ ಸ್ರೀ ಸ್ರೀ

## THE YĀDAVAS

### No. 197

(*B. K. No. 159 of 1933-34*)

BIJĀPUR, BIJAPUR TALUK, BIJAPUR DISTRICT

*Slab (A-37) in the Museum*

**Bhillama (A. D. 1190 ?)**

This inscription is dated in the **4th year** of the reign of **Bhillamadēva, Saumya, Kārtika śu. Pūrṇimā, Monday, Saṁkramaṇa, Bharaṇi.** In the cyclic year *Saumya,* corresponding to A. D. 1189, the details do not work out correctly. In the next year *Sādhāraṇa,* however, the details correspond regularly to **A. D. 1190, October 15, Monday.** On that day the *nakshatra* was **Bharaṇi** but there was no *Saṁkramaṇa.* This is probably the intended date.

It registers a grant of land and house-site made by **Vaijarasa-Daṇḍanāyaka,** an officer under *Mahāpradhāna Prachaṇḍa-daṇḍanāyaka* **Vayidēvarasa,** for repairs to the temple of **Boppēśvara** of **Taṁba.** The gift was entrusted to **Chandarāsi** and **Śāntarā i** the *āchāryās* of that temple Vaijarasa-Daṇḍanayāka is stated to be governing the six towns(*bāḍa* of **Taṁba.**)

## Text

*First Face*

1 ಶ್ರೀನಮಸ್ತುಂಗಸ್ಸಿರಶ್ಚುಂಬಿಚಂ–
2 ದ್ರಚಾಮರಚಾರವೇ ತ್ರೈಲೋಕ್ಯ–
3 ನಗರಾರಂಭಮೂಲಸ್ತಂಭಾಯ ಸಂ–
4 ಭವೇ (೦)॥ ಸ್ವಸ್ತಿ ಶ್ರೀಮತು ಯಾದವನಾರಾಯ–
5 ಣಂ ವಿಷ್ಣುವಂಶೋದುಭವಂ ದ್ವಾರಾ–
6 ವತೀಪು[ರವ]ರಾಧೀಶ್ವರಂ ಮಾಳವಮಲ್ಲ .
7 . . ಹಿಯಸೆಲ್ಲ ಗೂರ್ಜ್ಜರವಾರಣಾ[೦]–
8 [ಕು]ಸಂ ಪ್ರತಾಪಲಂಕೇಶ್ವರಂ ಕಂನಡ–
9 ರಾಯಸಂಹಾರಂ ಶ್ರೀಮತ–
10 ಪ್ರತಾಪಚಕ್ರವರ್ತ್ತಿ ಭಿಲ್ಲಮದೇವನ–
11 ಷ-ದ ನಾಲ್ಕನೆಯ ಸೌಮ್ಯಸಂವತ್ಸರದ
12 ಕಾರ್ತ್ತಿಕ ಸುದ್ಧ ಪುಂಣ್ಣಮಿ ಸೋಮ–
13 ವಾರ ವಿತೀಪಾತ ಸಂಕ್ರಮಾ–
14 ಣ ಭರಣೀನಕ್ಷತ್ರದಂದು ತತುಪಾದೋ–
15 [ಪ]ಜೀವಿಕಂ ⊚ ಸ್ವಸ್ತಿ ಸಮಸ್ತಪ್ರ–
16 ಸಸ್ತಿಸಹಿತಂ ಶ್ರೀಮನುಮಹಾಪ್ರಧಾ–
17 [ನಂ] ಸೇನಾಧಿಪತಿ ದಾಕತ್ತರನಿಯೋಗಾಧಿ–
18 ಪತಿ ನಿಯೋಗಯೋಗಂಧರಂ ಯಾಭಿನವ .
19 . . [ನ]ವ ಚಾಣಾಕ್ಯಂ ಮಹಾಪ್ರಚಂಡದ–
20 ಣ್ಣಾಯಕಂ ವಯಿದೇವ[ರ*]ಸರಯ[ಧಿ]–
21 [ಕಾ]ರಿ ಸಮಸ್ತಪ್ರಸಸ್ತಿಸಹಿತಂ
22 ಶ್ರೀಮತು ವೈಜರಸದಂಡನಾಯಕ–
23 ರು ತೆಂಬದಾಯಿಂಬಾಡವನಾ–
24 ಳುತ್ತಿರಲು ತೆಂಬದ ಶ್ರೀಬೊಪ್ಪೇಸ್ವರ[ದೇ]–
25 ವರ ಜೀರ್ಣ್ನೋದ್ಧಾರಕ್ಕೆ ಯಾ ದೇವ–
26 [ರ] ಕೈಯ್ಯರುವಣವ ಎಂಟು ಹಿ–
27 ಟ್ಟು ಸ್ಥಾನವಾರ್ಶ್ವ ಪ್ರಭು ಮುಖ್ಯವಾ–
28 ಗಿ ⊚ ಆ ಸ್ಥಾನದ ಸೂಚಾರ್ಯ್ಯ
29 ಚಂದರಾಸಿ ಸಾ[ಂ*]ತರಾಸಿ ಗುರುಗ–
30 ಳಿಗೆ ಧಾರಾಪೂರ್ವ್ವಕಂ ಮಾಡಿ
31 ಮಾಣಿಕೇಸ್ವರದ ಮತ್ತರು ೧೫೦
32 ತೋಂಟ ಹಿರಿಯಕೋಲ ಮತ್ತರು ೧ ದೇವರಿಂ
33 [ಬ]ಡಗಲು [೧]೫೦ ಕೆಯ್ಯ ನೀಳ ಯಿಪ್ಪ–
34 [ತ್ತು] ಕೈಯ್ಯ ಅಗಲದ ನಿವೇಶ–
35 [ನ] ಯಿಂನ್ತಿನಿತುಟುವಂ ಸರ್ವ್ವನಮ–
36 ಸ್ಯವಾಗಿ ಬಿಟ್ಟ ದತ್ತಿ . . . . . ದ ಹೇ–
37 ಟಿಂಗೆ ಮಾ(೦)ನವತ ।

*Second Face.*

1 ಯು[ರೆ]ಯ ಹೇಱುಂಗೆ
2 ಯೆರೆ ೨೫ । ಹೊಂ[ಗೆ*]
3 ಹಂನೆರಡು ಅ–
4 ದಕೆ ಯೆಂಣ್ಕ
5 [ಗಾ]ಣಕೆ . . .
6 . ದೇವರಿಗೆ ವೊಂ–
7 . . ಬು ದೇವರಿಂ
8 ತೆಂಕಲು ಮಠ ◎
9 ಸ್ವದತ್ತ್ವಾಂ ನಧಿಕಂ ಪು–
10 ಣ್ಯಂ ಪರದ–
11 ತ್ತಾನುಪಾಲನಂ
12 ಪರದತ್ತಾಪಹಾರೇಣ
13 ಸ್ವ[ದ*]ತ್ತಂ ನಿಷ್ಫಲಂ ಭವೇ–
14 ತು ◎ಸ್ವದತ್ತಂ ಪ–
15 ರದತ್ತಾಂ ವ ಯೋ ಹ–
16 ರೇತಿ ವಸುಂಧರಾ ಷ–
17 ಷ್ಟಿವರುಷ್ಷ ಸಹ–
18 ಸ್ರಾಯ ವಿಷ್ಠಾ
19 ಯಾಂ ಜಾಯತೇ
20 ಕ್ರಿಮಿ[ಯೀ]ಧರ್ಮ್ಮವ[ನು]
21 ಆವನಾನೊ [ಅ*]ಯುಷಮಂ
22 ಬಗೆದಡೆ ವಾರಣಾಸಿಯೊ–
23 [ಳಗಂ] ಬಸಿಱು . . .

*Top of the Second Face*

1 . . ನ ಹಳ್ಳಿಯ ದಾರಿ ಮೂ .–
2 . ೦ ಮೂಡಲು ಹೆಣ್ತಗೆಱೆಯಿಂ ತೆ–
3 ಂಕಲು . . . ಬಾಳಿಂ ಪಡುವಲು
4 ನ ಸಾ . . ಲಿಂ ಬಡಗಲು ಶ್ರೀ[ಮ]–
5 ತು ಬೊಪ್ಪೇಸ್ವರದೇವರಿಗೆ . ಸಲು . .
6 . ತಂದಳಿವ ಹ . . . .
7 ಳ ಕೆರು ೬ಂ . ಧರಂ ಪಡಿಸಿ . . .
8 ವೂ . . . ಕರಣಿಕ . . . .
9 ಮ್ಮ ತುಪ್ಪ . . ೧ ಅಡಕೆ ೧ ಎತ್ತಿ . . .
10 ಸೋಮವಾರ . . . . . . . .
11—16 *Worn out*
17 [ಮಂಗಳ]
18 ಮಹಾ ಶ್ರೀ .

## No. 198

(*B. K. No. 131 of 1933-34*)

BIJĀPUR, BIJAPUR TALUK, BIJAPUR DISTRICT

*Sixth pillar in Ark-killah*

### Jaitugi–A. D. 1196

This inscription refers itself to the reign of **Pratāpachakravarti Jaitapāḷadēva** and is dated in the **6th year** of his reign **Naḷa, Pushya śu.4, Wednesday, Uttarāyaṇa-saṁkramaṇa**, corresponding regularly to **A. D. 1196, December 25, Wednesday.**

It records the gift of the income derived from certain taxes, made by *Sēnādhipati* **Saṁkarasa-Daṇḍanāyaka** and *Karaṇa* **Kēsiyaṇayya-Nāyaka** who were governing **Tardavāḍi One thousand**. The gift was made to god **Nṛisiṁha** of **Vijayāpura** (modern Bijāpur), which is described as *Dakshiṇa-Vāraṇāsi.*

### Text

1 ಶ್ರೀನೃಸಿಂಹಾಯ ನಮಃ । ಸಂಪತ್ಸಂಧವಧಾವನಃ ಪರಿಹರನ್ದೋಷಾನಶೇ-
2 ಷಾನ್ಸದಾ ಪದ್ಮಾಸದ್ಮನಿಜೋದರಃ ಪರಿಜಯದ್ರಾಜೀವನೇತ್ರಶ್ರಿಯಃ । ರಕ್ಷ-
3 ಸ್ವಕ್ಷಯಕಾರಕೋದಿತಿಸುತವ್ರಾತಾಬ್ಧಿವೃದ್ಧ್ಯೌ ವಧುಃ ಶಶ್ವಚ್ಛ್ರೀವಿಜಯಾಪುರ-
4 ದ್ವಿಜಜನಂ ಪಾಯಾನ್ನೃಸಿಂಹೋ ಮುದಾ ॥ ◎ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮತು ಯಾ-
5 ದವನಾರಾಯಣ ಪ್ರತಾಪಚಕ್ರವರ್ತ್ತಿ ಜೈತಪಾಳದೇವರ ವಿಜಯರಾಜ್ಯಮುತ್ತರೋತ್ತರಪ್ರ-
6 ವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ । ತತ್ಪಾದಪದ್ಮೋಪಜೀವಿ ॥ ಪರಿಜಿತರಣ
ರಂಗಶ್ಚಾರು-
7 ವಲ್ಗತ್ತುರಂಗಃ ಪ್ರಗತಸಕಳಭಂಗಃ ಶತ್ರುಲಕ್ಷ್ಮೀಭುಜಂಗಃ । ಗಳಿತಸಕಳಪಾಪಸ್ತ್ವಜೈತಾವನೀಪೋ
8 ಜಯತಿ ಮದನರೂಪೋ ಜೈತಸಿಂಹೋ ಮಹೀಪಃ ॥ ತತ್ಪಾದಪದ್ಮೋಪಜೀವಿ ॥ ಶ್ರೀಶಂಕರ
ಚಮೂನಾಥಭಾ-
9 ನುಃ ಪಾಯಾದ್ಭವಂ ಸ್ಥಿರಂ । ಯತ್ಕಾಂತ್ರಕರಸಂಪರ್ಕ್ಕಾದ್ವಿಕಾಸಿ ಜಗದಂಬುಜಂ ॥ ಸ್ವಸ್ತಿ ಸಮಸ್ತ
ಪ್ರಶಸ್ತಿಸಹಿತಂ
10 ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಸಂಕರಸದಂಡನಾಯಕರು ಕರಣಂ ಕೇಸಿಯಣಯ್ಯ
ನಾಯಕ-
11 ರುಂ ತರ್ದ್ದವಾಡಿ ಸಾಯಿರಮುಂ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿಂದಾಳುತ್ತಮಿರ್ದ್ದು ॥ ಸ್ವಸ್ತಿ
ಶ್ರೀಮತು
12 ಯಾದವನಾರಾಯಣ ಪ್ರತಾಪಚಕ್ರವರ್ತ್ತಿ ಜೈತಪಾಳದೇವವರ್ಷದ ೬ನೆಯ ನಳಸಂವತ್ಸರದ ಪುಷ್ಯ
ಶು-
13 ದ್ಧ ೪ ಬುಧವಾರ ವ್ಯತೀಪಾತ ಉತ್ತರಾಯಣಸಂಕ್ರಮಣದ ದೇವಸ ಶ್ರೀಮದ್ದಕ್ಷಿಣ
ವಾರಣಾಸಿ
14 ವಿಜಯಾಪುರದ ಶ್ರೀನೃಸಿಂಹದೇವರ್ಗ್ಗೆ ಆ ದೇವರಾಳ್ಕೆಯ ಸರ್ಬ್ಬನಮಸ್ಯದ ಹೊಸಹಳ್ಳಿಯ ಅ-
15 ಧಿಕಾರಿಗಳ ಕಾಣಿಕೆಹೊದಕೆಯುಂ ತಳವೃತ್ತಿಯ ಹೆಗ್ಗಡೆಯ ಕಾಣಿಕೆಯುಂ ತಳಾಱಗಾಣಿಕೆ-
16 ಯುಂ ಬಣ್ಣಿಗೆಯುಂ ಗ್ರಾಮಪಂಚಕಮುಂ ಬೆಳ್ದಾಯಮುಂ ಯಿಂತಿಉಮುಬ್ಬವಾಗಿ ಸಕಳ ತ್ರಿಭೋಗವುಂ
17 ಆ ದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿಕೊಟ್ಟರು ॥ ಮಂಗಳ ಮಹಾಶ್ರೀ ಶ್ರೀ ॥ ಸ್ವದತ್ತಾಂ ಪರದ
ತ್ತಾಂ ವಾ
18 ಯೋ ಹರೇತ ವಸುಂಧರಾಂ । ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥

## No. 199

*(B. K. No. 157 of 1933–34)*

BIJAPUR, BIJAPUR TALUK, BIJAPUR DISTRICT

*Slab (No. A–35) in the Museum*

### Jaitugi–A.D. 1196

This inscription refers itself to the reign of **Pratāpachakravarti Jaitapāḷadēva** and is dated in **Śaka 1119, Naḷa, Pushya śu, Pañchami, Wednesday, Saṃkramaṇa** corresponding to **A.D. 1196, December 25, Wednesday, f.d.t. 66.** The *Śaka* year cited was the current year.

It registers a grant of land and house site made by **Dēḍara Chilayya** to god **Bandēśa** at **Kiṟiy-Iṇḍi.** The gift-land was received by him from the king, the *Ūroḍeyas, Mūligas, Aṟuvattokkaḷu* and *Hiṭṭus* and handed over to the Saint **Chandrābharaṇa-brati.** Kiṟiy-Iṇḍi (modern Iṇḍi) is stated to be situated in the **kampaṇa** of **Mūvattāṟumbāḍa** in **Tardavāḍi-pradēśa**

### Text

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂ-
2 ಭಮೂಲಸ್ತಂಭಾಯ ಶಂಭವೇ ‖ ಜಂಬೂದ್ವೀಪದ ಮಧ್ಯದಲ್ಲಿ ನೆಲಸಿರ್ಕ್ಕುಂ
3 ಬೊಂ[ದೆ]ಯೊಂದಂದದಿಂ ಪೊಂಬೆಟ್ಟುಂ ಭರತೋರ್ವ್ವೀದಕ್ಷಿಣದೊಳಂತಾ ದೇಶದೊಳ್ಕುಂತಳಂ
4 ಕುಂಭತ್ಕುಂತಳದಲ್ಲಿ ಶೋಭಿಸುವದಂತಾ ತರ್ದ್ದವಾಡಿಪ್ರದೇಶಂ ಬಣ್ಣಿಪ್ಪೊಡತರ್ಕ್ಕ-
5 ಮಾ ವಿಶಯದೊಳ್ತಾಂ ಕಂಪಣಂ ರಂಜಿಕುಂ ‖ ಮೂವತ್ತಾಱುಂಬಾಡಂ ಧರಾ-
6 ವನಿತಾವದನಮುಕುರವಾ ಕಂಪಣದೊಳು ದೇವೇಂದ್ರಪುರಮನಿಳ್ವುದು ಭಾವಿಸೆ
7 [ಕಿ]ಱಿಯಿಂಡಿಯದಱ ಮಹಿಮೋನ್ನತಿ ತಾಂ ‖ ಹರನಂ ಭಗೀರತಂ(ಥಂ) ಬಿತ್ತರದಿಂ ಮೆಚ್ಚಿಸಿ ಬಳಿ
8 [ಕ್ಕೆ]ಸಗರರ ಮೋಗಾಸುರನದಿಯಂ ತರ್ಪ್ಪಂದೀ ಕಿಱಿಯಿಂಡಿಗೆ ಬಂದುದೊಂದು ಕಡಲತಿಮು-
9 [ದ]ದಿಂ ‖ ಆ ಕಡಲೊಳು ಕರ್ಕಟಕ[ನನೇಕ]ಗುಣೋನ್ನತಿಯ ದಿಬ್ಯರಿಸಿ ಬಂದಂ ಮಾತ್ರಾ
ಕಡಲೇಂ-
10 . . ಯುಕಳ್ಳಮದು ಕರ್ಕಟಕಾಂಕವಿಂಡಿಯೆಂಬಭಿದಾನಂ ‖ ಉಪಾಸನಾಗ್ನಿಹೋತ್ರಿಗಳಾ
11 [ಪು]ರದೊಳು ನೀರಪುಟ್ಟಿಯುಂ ತಳದೊಳು ತ[ಪ್ಪಾರ್] ಪತಿಹಿತೆಯನ್ನರ್ತಿಯಶಾರ್ವಾನುಗ್ರ-
12 [ಹ]ಸಮರ್ತ್ಥರಲ್ಲಿಯ ಪಾಬ್ಬರು ‖ ವೇದಂ ಶಾಸ್ತ್ರಂ ತರ್ಕ್ಕಂ ವೇದಾಂತಂ ಸ್ಮೃತಿಪುರಾಣ-
13 ಕಾವ್ಯಾಗಮದೊಂದೋದಿಂದಿರುಳುಂ ಪಗಲುಂ ಬಾ[ಳೆ]ನೊಪ್ಪುವುದು ನೋಡ
14 ಕಿಱಿಯಿಂಡಿ ದಿಟಂ ‖ ಹರಿಗ್ರಿಹದಿಂ (ಹರಿಗೃಹದಿಂ) ಸುರಗೃಹದಿಂದರುಹ-
15 ಗೃಹದೆ ಬೌದ್ಧಾಲಯದಿಂ ಗೊರವರ ಸವಣರ ಬೌದ್ಧರ ನೆರವಿಗಳಿಂದಿಂಡಿ ನಾ-
16 ಡೆ ಸೊಗಯಿಸಿ ತೋರ್ಕ್ಕುಂ ‖ ಎಳೆಮಾವಿಂ ಗಿಳಿಯಿಂ ಲತಾಪ್ರತತಿಯಿಂ ಭೃಂಗಾ-
17 ಳಿಯಿಂ ಪೂತ ಪೂಗೊಳದಿಂ ಶಾಳಿವನಾಳಿಯಿಂ ಶಿವಗ್ರಿಹದ್ಯುತಂಗಳಿಂ ಮತ್ತ-
18 ಕೋಕಿಳದಿಂ ಶೋಭಿಸುವಿಕ್ಷುವಾಟತತಿಯಿಂ ಪೂಗೀವನಶ್ರೇಣಿಯಿಂದಿಳೆಗಾದ-
19 ರ್ಷದ ಭಂಗಿಯಿಂ ಸೊಗಯಿಕುಂ ಚಿ[ಕ್ಕ]ಂಡಿಯೀ ಧಾತ್ರಿಯೊಳು ‖ ಆಪೂರರೂರೊಡೆ-
20 ಯರ್ಕ್ಕಳು ಶ್ರೀವತ್ಸಕುಲಾಬ್ಧಿದಿನಪರೆನಿಸಿದರಾ ಮೂವರುಮವರಾರೆಂದಡೆ
21 ಸೋಮರಸಂ ಕೇಶಿರಾಜ ವಿಭು ಬಂಮರಸಂ । ಅವರನ್ವಯಮಂ ಪೇಳ್ವಡೆ ಭುವನಸ್ತು-
22 ತನೆನಿಪ ನಾರದನದ್ವೇದಿಗೆ ಸಂಭವಿರ್ಸಿದರ[ವ[1]]ರೆಂದಡೆ ಕವಿಗಮಕಿಗಳನವೆ ಪೊಗಳಲುಂ
23 ಬಣ್ಣಿಸಲುಂ । ವಿನಯಾಂಭೋನಿಧಿ ಬೊಪ್ಪದೇವವಿಭುಗಂ ಲಬ್ಧಾಬ್ಧಿವೈಗಂ ಪುಟ್ಟಿದಂ ಮ-

---

1 The letter ವ is written above the line.

24 ಸುವರ್ಣಾಗ್ಗ್ರ್ಗಂ ಗುಣಿಯಪ್ಪ ಬಂಮರಸನಾ ನಾಗೌವ್ವೆಗಂ ವಿಪ್ರವಂಶನಿಧಾನಂ ಗು-
25 ಣಿಯಪ್ಪ ಕಾಳಿಮರಸಂಗಂ ಪುಟ್ಟಿದಂ ಕೇಶವಂ ವನಜಪ್ರೋ[ದ್ಭ]ವವಂಶಭೂಶಣ-
26 ನಗಣ್ಯಾದಾರ್ಯ್ಯಕಬ್ಬದ್ರುಮಂ ॥ ಶ್ರೀವಾದಿರಾಜವಿಧುಗಂ ಶ್ರೀವಾನಿನಿ [ಟಿ]-
27 ಕ್ಕಣಕ್ಕೆಯುವರಿರ್ಬ್ಬರ್ಗ್ಗಂ ಸೋಮಯ್ಯಂ ವಾಮಯ್ಯಂ ಪ್ರೇಮದಿನೊಗೆದರ್ಪ್ಪರಾರ್ತ್ತ ಪಾ-
28 ವನಚರಿತರು ॥ ಕೊಳದೊಳು ಜಳರುಹದಂತಿರೆ ಜಳನಿಧಿಯೊಳು ಕೃಷ್ಣನಂತೆ ಮಧ್ಯಸ್ಥ ಜ-
29 ನಕ್ಕಳಿಕದ ತಿಳಕದ ತೆಜದಿಂ ಕುಲದೀಪಕಂ ನಾಚಿರಾಜನಿಂದಿಯೊಳಿಪ್ಪಂ ॥ ಆಜುವತ್ತೆಂಟುಂ ತೀ-
30 ರ್ತ್ಥದ ಕಿಡೆಯಿಂಡಿಯು ತಾವು ಲೇಕಿನುತ್ತ್ಮಲವಿಂದಂ ಪೆಜೆಯುಂ ನೂಡಿದ ದೇವಂ ಕಜೆಕಂಠಂ ನೆ-
31 ಲಸಿ ಬಂದಿನಾಥಂ ನಿಂದಂ ॥ ಆ ಚಂದ್ರಚೂಡದೇವಂಗಾಚಾರ್ಯ್ಯಂ ದಿಬ್ಯಮುಂ ಮುನೀಂದ್ರಾ-
32 ಭರಣಾ ಶ್ರೀಚಂದ್ರಾಭರಣಬ್ರತಿ ಯಾಚಕಕಬ್ಬದ್ರುಮಂ ಶಿವಾಗಮತಜ್ಞಂ ॥ ಆಕಿದೆಯ-
33 ಣ್ಣಯಲ್ಲ॥ ದೇಡರದಾಸನ ಕುಲದೊಳು ನೋಡಿರೆ ಸೋಮಯ್ಯನೊಗೆದನಾತನ ಸತಿ ತಾಂ ನೋಡ ಪ-
34 ತಿಬ್ರತೆ ಸದ್ಗುಣ ರೂಢಿಯ ಹೊರ್ಲ್ಲಾವ್ವೆಯೆಂಬಳಬಳಾರತ್ನಂ ॥ ಅವರಿರ್ಬ್ಬರ್ಗ್ಗೊಗೆದಂ ತಾಂ
35 ಭುವನಸ್ತುತನೆನಿಸಿ ನೆಗಳ್ದ ಚೀಲಾಳ್ಯಂ ನಂದವಿಸಿದವೊಲು ಚೀಲಯ್ಯಂ ಕವಿಜನಸಂಸ್ತು-
36 ತ್ಯನೆನಿಪ ಮೈಲಂ ಕೇತಂ ॥ ನರಪಾಳಾಗ್ರಣಿ ಜೈತಪಾಳನೃಪನುಂ ಶ್ರೀಲಕ್ಷ್ಮಿದೇ-
37 ವಾಂಕನುಂ ಧುರಧೀರಂ ನೆರೆಯೊಡೆ ಗಂಡನೆನಿಪೀ ಶ್ರೀ[ಬಂದ]ಭೂಪಾಳನುಂ ಪರಿವಾರಂ
38 ಕಲಿಸಾಹಣಾಧಿಪತಿ ತಾಂ ಶ್ರೀಸಂಗನುಂ ದೊಂಗನುಂ ಪುರುಶಮ್ಮೂರ್ವರುವೆಂಬವೋ-
39 ರ್ಕ್ಕೆಗಳ್ದರಂತಾ ಮೂವರುಂ ಮೂಲಿಗರು ॥ ಸ್ನಾನಂ ಪಾನ್ನಂ ಪಿಟ್ಟುಂ ಭೂನುತರಪ್ಪಜು-
40 ವತೊಕ್ಕಲುಂ ಬಂಮರಸಂ ಮಾನನಿಧಿ ಕೇಶಿರಾಜಂ ಜೈನಾಗಮವಾರ್ದ್ಧಿಸೋಮನೆನಿಸುವ
41 ಸೋಮಂ॥ ◎ ಸ್ವಸ್ತಿ ಶ್ರೀಮತ್ಪ್ರತಾಪಚಕ್ರವರ್ತ್ತಿ ಯಾದವನಾರಾಯಣ ಜೈತಪಾಳದೇವ-
42 ರು ದೇವಗಿರಿಯ ನೆರೆವೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಸಕವ-
43 ರುಶದ ೧೧೧೯ನೆಯ ನಳಸಂವತ್ಸರದ ಪುಶ್ಯ ಶುದ್ಧ ಪಂಚಮಿ ಬುಧವಾರ ಸಂಕ್ರಮ-
44 ಣದಂದು ॥ ಇನಿಬರ ಕೈಯೊಳು ಧಾರೆಯನನುನಯದಿಂ ಪಡದು ಬಳಿಕ ದೇಡರ
45 ಚೀಲಂ ಮುನಿಚಂದ್ರಾಭರಣಬ್ರತಿಗನುನಯದಿಂ ಕಾಲಕರ್ಚ್ಚಿ ಧಾರೆಯನಿತ್ತಂ॥ ಹಂನೆರಡು ಕೈಯ ಮ
46 ನೆಯುಂ ಹಂನಿರ್ಮ್ಮತ್ತ್ತರ್ಸ್ಸಭೂಮಿ ಯುಪ್ಪಾ ಕಯ್ಯಂ ತಂನೊಲವಿಂ ಬಂದೇಶಂಗುಂನತಮತಿ ದೇಡಚೀ-
47 ಲ ಧಾರೆಯನಿತಂ(ತ್ತಂ) ॥ ಮೇರಾಳಿಕೆ ಮನೆಯನ.ಂ ಮೂಲಿಗರುಂ ಪ್ರಥುಗಳೆಂಟು ಪಿಟ್ಟುಂ
ಮಾನ್ಯಂ [ಕೇ]ಳಿರ ಪ-
48 ರ್ಬ್ಬನಮಕ್ಕಳ ಪಾಳಿಪೆವಾಮೆಂದು ಧಾರೆಯಿತ್ತರ್ಮ್ಮವದಿಂ ॥ ಕೇತೋಜಂ ಬಂಮ್ಮೋಜಂ ನೂತ[ನ]
49 ಮನು ವಿಶ್ವಕರ್ಮ್ಮರೆಂಬಕ್ರ್ನಡದವಖ್ಯಾತಂ ಬೆಡಗಿನ ಸೋಮಂ ಸಾತಿಶಯೊಕ್ತಿ-
50 ಯೊಳ್ ಪೇಳ್ದನೆನೆ ಮೆಚ್ಚದರಾರು ॥ ಸ್ವದತ್ತಂ ಪರದತ್ತಂ ವಾ ಯೋ ಹ-
51 ರೇತಿ ವಸುಂಧರಾ ಶಷ್ಟಿರ್ವರುಶಸಹಸ್ರಾಣಿ ವಿಷ್ಟಾಯಾಂ ಜಾಯ-
52 ತೇ ಕ್ರಿಮಿ ◎ ◎ ◎ ಈ ಕತ್ತಿಗೆಯುಂ ಕೊಂಡಿಂತೀ ಕವಿಲೆಯ ಕೊಂದು
53 ನೆತ್ತರಂ ಬೇಗನಿಲೆಯಿಂದಾಕಂಠೋಷ್ಟಂ ಕುಡಿದವನೀ ಕೆಯ್ಗುರುವಣಮ-
54 ನಳಿವ ಮಾಡಿದ ಮನುಜಂ ◎ ◎

### No. 200

*(B. K. No. 181 of 1933-34)*

KUMATHE, BIJAPUR TALUK, BIJAPUR DISTRICT

*Slab in the Hanumantadēva temple*

**Siṁghaṇa A.D. 1200**

This inscription is dated in the **2nd year** of the reign of **Siṁgaṇadēva, Raudri, Vaiśākhaba. Amāvāsyā, Monday, solar eclipse.** The date is irregular. In *Raudri*,

corresponding to A. D. 1200, *Vaiśākha amāvāsyā* did not fall on Monday nor was there a solar eclipse in that year. The *tithi* given corresponds to **A. D. 1200, May 14, Sunday**.

It registers a gift of land to god **Kannēśvaradēva** of **Kumbiṭage** by **Kannisetti**, after purchasing it from **Kūcharasa**, the *Mahāprabhu of* **Arjunige.**

**Text**

1 ಶ್ರೀನಮಸ್ತುಂಗಸಿರಶ್ಚುಂಬಿಚಂದ್ರಚಾ-
2 ಮರಚಾರವೇ ತ್ರೈಳೋಕ್ಯನಗರಾರಂಭ(ಂ)ಮೂ-
3 ಲಸ್ತಂಭಾಯ ಸಂಭವೇ॥ ಸ್ವಸ್ತಿ ಶ್ರೀಮತು
4 ಯಾದವನಾರಾಯಣ ಪ್ರತಾಪಚಕ್ರ-
5 ವರ್ತ್ತಿ ಸಿಂಗಣದೇವವರ್ಷದ ಯೆರಡನೆಯ ರೌದ್ರಿ-
6 ಸಂವಛ್ಸ(ತ್ಸ)ರದ ವೈಶಾಖ ಬಹುಳ ಅಮಾವಾಸೆ
7 ಸೋಮವಾರ ಸೂರ್ಯ್ಯಗ್ರಹಣ ನಿಮಿತ್ತ-
8 ವಾಗಿ ತರ್ದ್ದವಾಡಿ ಸಾಯಿರದ ಶ್ರೀಮದಗ್ರ-
9 ಹಾರ ಗೆಱ್ಟಿಯ ಪ್ರವಿಷ್ಟ ಕುಂಬಿಟಗೆಯ ಶ್ರೀ-
10 ಕಂನೇಸ್ವರದೇವರ್ಗ್ಗೆ ಕಂನಿಸೆಟ್ಟಿಯರು ಅರ್ಜ್ಜುನಿ-
11 ಗೆಯ ಮಹಾಪ್ರಭು ಕೂಚರಸ-
12 ಗಳ ಕಯ್ಯಲು ಅಲ್ಲಿಯ ಮೂಲಿಗರ ಸ್ವಾನಮಾ-
13 ನ್ಯದ ಸಂನಿಧಾನದಲು ತಂಮ ಅರ್ಜ್ಜುನಿಗೆಯ ಬ-
14 ಡಗಣ ಹೊಲನೊಳಗೆ ಶ್ರೀಸೋಮನಾಥದೇವ-
15 ರ ಕೆಯಂ ತೆಂಕಲು ತದ್ವಲದಾಗೆಯು ಸೀಮೆಯ-
16 ಂ ಮೂಡಲು [ಯಿಂನೆಸ] ಹನಿಗೆಯಾಗಿ ಬೆಂ-
17 ಕೊಳ್ಳನ ಕೋಲಲು ಮತ್ತರು ೫ ಮಂ ಮಾಱುಗೊಂಡು
18 ಸರ್ವ್ವನಮಸ್ಯವಾಗಿ ಧಾರಾಪೂರ್ವ್ವಕಂ ಮಾ-
19 ಡಿ ಕೊಟ್ಟರು ಮಂಗಳ ಮಹಾಶ್ರೀ ಶ್ರೀ ಶ್ರೀ॥

## No. 201

(*B. K. No. 182 of 1933-34*)

KUMAṬHE, BIJAPUR TALUK, BIJAPUR DISTRICT

*Slab lying in the Hanumantadēva temple*

**Siṁghaṇa— A. D. 1201**

This inscription is dated in the **3rd year** of the reign of **Siṁgaṇadēva, Durmati, Pushya ba. Amāvāsyā, Monday**. The date is irregular. The given *tithi* corresponds to **A. D. 1201, December 27, Thursday**.

It records a gift of tolls made by *Suṁkadadhikāri* **Kācharasa.** A division of **Fifty** (name lost) in **Tardavāḍi One-Thousand** is mentioned.

**Text**

1 ಸ್ವಸ್ತಿ ಶ್ರೀಮತು ಯಾದವನಾರಾಯಣ ಪ್ರ-
2 ತಾಪಚಕ್ರವರ್ತ್ತಿ ಸಿಂಗಣದೇವವರ್ಷದ ಮೂಱನೆಯ

3 ದುರ್ಮ್ಮತಿಸಂವತ್ಸರದ ಪುಷ್ಯ ಬಹುಳ ಅ-
4 ಮಾವಾಸೆ ಸೋಮವಾರದಲ್ಲಿ ಶ್ರೀಮತು ತರ್ದ್ದ-
5 ವಾಡಿ ಸಾಯಿರದ ಮೊದಲುಗೆಂಪಣಂ . . .
6 . . . ಅಯ್ವತ್ತರ ಸುಂಕದಧಿಕಾರಿ . . . .
7 . . ಕಾಚರಸಂಗಳು . . . . .
8 . . . . ನಿಗೆಯ . . . . .
9 . . . . . ಸುಂಕವ ಧಾರಾ . . . . [1]

## No. 202

*(B. K. No. 119 of 1933–34)*

ARJUNAGI, BIJAPUR TALUK, BIJAPUR DISTRICT

*Slab set up in the Hanumantadēva temple*

**Siṁghaṇa—A.D. 1207**

This inscription referring itself to the reign of **Siṁgaṇadeva** ruling from **Dēvagiri** is dated in **Śaka 11[30], Prabhava, Thursday, lunar eclipse.** The month and the *tithi* are lost. The *Śaka* year cited is the current year. In the cyclic year *Prabhava*, coinciding with **A.D. 1207** there were two lunar eclipses and the one which occurred on **Thursday** was on *Srāvaṇa Pūrnimā* corresponding to **August 9.**

It states that when a subordinate (name lost) of the king was governing **Taddavaḍi One-thousand**, **Muddarasa**, **[Kū]charasa** and others of **Arjunige** situated in **Bāge Fifty** made a grant of land, house site and oil mill for worship and offerings to god **Svayambhu-Mallikārjunadēva**. The record is very badly damaged.

**Text**

1–2 Damaged .
3 . . . . . . ಪ್ರತಾಪಚ[ಕ್ರವರ್ತ್ತಿ] ಸಿಂಗಣ[ದೇವರು] ದೇವಗಿರಿಯ ನೆಲೆ-
4 . . . . . . . ಖಸಂಕಥಾ[ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ॥ ] ತತ್ಪಾದಪದ್ಮೋಪ
ಜೀವಿ ಶ್ರೀಮ-
5 . . . . . . . [ತರ್ದ್ದವಾಡಿಸಾಯಿರಮ]ನಾಳುತ್ತಮಿರೆ
6 . . . . . ೧೧[೩೦]ನೆಯ ಪ್ರಭವಸಂವತ್ಸರದ . . . . . ಬ್ರಿಹಸ್ಪತಿವಾರ
[ಸೋ]-
7 ಮಗ್ರಹಣ ವ್ಯತೀಪಾತದಂದು ಬಾಗೆ ಅಯ್ವತ್ತರೊಳಗಣ ಅರ್ಜ್ಜುನಿಗೆಯ [ಮಹಾ]-
8 [ಪ್ರಭು] ಮುದ್ದರಸ [ಕೂ]ಚರಸಂಗಳುಂ ಮೂ[ಲಿಗ] ದೊಪ್ಪಗಾವುಂಡನುಂ ಎಂಟು-
9 [ಪ]ಟ್ಟುಗಳುಂ [ಸ್ಥಾನ]ಮಾನ್ಯಕಾಱರುಂ ಮೇಲಾಳಿಕೆಯ ಮ . . . . . . ಇಂತಿನಿಬರುಂ
[ತಂ]-
10 ಮೊಳಗೆ ಏಕಮತ್ಯವಾಗಿ [ಸ್ಥಳ]ದ್ರ್ಯ ಗಣ . ರದ ಶ್ರೀಸ್ವಯಂಭುಮಲ್ಲಿಕಾ-
11 ರ್ಜ್ಜುನದೇವರ ಸ್ಥಾನಾಚಾರ್ಯ್ಯ . . . . . . . . . ಗುರುಗಳ
12 . . . . . . ಯ್ಯನು ಆ ಮಲ್ಲಿಕಾರ್ಜ್ಜುನದೇವರ ಅಂಗಭೋಗ ರಂಗಪೂಜೆ-
13 ಗೆ [ಖಂ]ಡಸ್ಫುಟಿತಜೀರ್ಣ್ಣೋದ್ಧಾರಕೆಂದು ಧಾರಾಪೂರ್ವ್ವಕವಾಗಿ . . ಲಿಗೆಯ

1 The continuation is lost.

14 . . . . . . . ಅಡ್ಡದಾರಿಯಿಂ ಮೂಡಲು ಬಾಗೆಯ ಸೀಮೆ[ಯಿಂ] . . .
15 . . . . . . . . . . ಮಾಣಿಕೇಶ್ವರ[ದ ಕೋಲಲು] . . .
16 ತ್ತರು ಕೆಯ್ಯುಯ್ಯುವಂ . . . . ಪೆರ್ಬ್ಬಟ್ಟೆಯ . . . . . .
17 ತ್ತರು[೧೩]ಕೆಯ್ಯ ಅಗಲ ೨೪ ಕೆಯ್ಯ ನೀಳದ ಮನೆ ನಂದಾದೀವಿಗೆಗೊಂದು ಗಾಣ ಇಂತಿ-
18 ನಿಸುವಂ ಸರ್ವ್ವನಮಸ್ಯವಾಗಿ ಹಡದು ಕೊಟ್ಟರು [ಇ]ಧರ್ಮ್ಮವಂ ಪ್ರಜೆಗಳುಂ [ಮಾ]—
19 ಲಿಗರುಂ ಎಂಟು ಹಿಟ್ಟುಂ ಸ್ಥಾನಮಾನ್ಯಕಾಜಿರುಂ ಪ್ರತಿಪಾಳಿಸುವರು ॥
20 ಬಹುಭಿರ್ವ್ವಸುಧಾ ದತ್ತಾ ರಾಜಭಿಃ ಸಗರಾದಿಭಿಃ ಯಸ್ಯ ಯಸ್ಯ ಯದಾ
21 ಭೂಮಿಸ್ತಸ್ಯ ತಸ್ಯ ತದಾ ಫಲಂ॥ ಗಾಮೇಕಾಂ ರಶ್ಮಿಕಾಮೇಕಾಂ ಭೂಮೇರಪ್ಯ[ರ್ದ್ಧ]-
22 ಮಂಗುಲಂ ಹರಂನರಕಮಾಪ್ನೋತಿ ಯಾ[ವದಾಭೂತಸಂಪ್ಲವಂ]॥

## No. 203

*(B. K. No. 186 of 1933-34)*

NIḌŌNI, BIJAPUR TALUK, BIJAPUR DISTRICT

*Slab built into a side wall of the well at the village gate*

**Siṃghaṇa—A.D. 1208**

This badly damaged inscription is dated in the **1[0]th** year of the reign of **Siṃgaṇadēva, Śukla, Śravaṇa su. 1[5], Monday, lunar eclipse.** In the cyclic year *Śukla, Śrāvaṇa su.* 15 corresponded to **A.D. 1209, July 18.** The week-day was Saturday and not Monday as cited. There was a lunar eclipse on that day. In the previous year (*i.e., Vibhava*) however, the details given correspond regularly to **A. D. 1208, July 28, Monday; f.d.t. · 04.** On that day there was a lunar eclipse. This is probably the intended date.

It registers a grant of land for the worship and offerings to a god (name lost). Another grant of certain incomes to god **Māṇikēśvara** made by the *Baṇajigas* is also recorded. . The *agrahāra* town **Niḍuvaṇi** is mentioned.

### Text

1-4 damaged
5 . . . . . . . . . . . . . [ನು]ಕೂಲರಾಗಿ ಸ್ವಸ್ತಿ [ಯ] . . . .
6 ಸ್ವಾಧ್ಯಾಯಧ್ಯಾನಧಾರಣ . . . . . . . . [ಸ]ಮಾಧಿಶೀಲ . . . . .
7 . . ಶ್ರೀಮ . . . . . ಗ್ರಹಾ[ರಂ ನಿಡು]ವಣಿಯ ಪ್ರಧಮುಖ್ಯವ . . . . . .
8 . . . . . . . [ಯಾದವನಾರಾ]ಯಣಂ [ಪ್ರತಾಪ]ಚಕ್ರವರ್ತ್ತಿ ಸಿಂ[ಗ]ಣದೇವವರುಷ
9 ೧[೦]ನೆಯ ಸುಕ್ಲ[ಸಂವತ್ಸರ ಶ್ರಾವ]ಣ ಸುದ್ಧ ೧[೫] ಸೋಮವಾರದಂದು ಸೋಮ ಗ್ರಹಣ ನಿ-
10 [ಮಿ]ತ್ತವಾಗಿ ಶ್ರೀ . . . . . . . . . . ಚಯಿತ್ರಪವಿತ್ರಕ್ಕಂ ಅಂಗಭೋಗರಂಗ ಭೋ[ಗ]
11 [ಖ]ಂಡಸ್ಫುಟಿತಜೀ[ರ್ಣೋದ್ಧಾರ] . . . . ದೇವರ ಕೆಯಿಂ ಬಡಗಲು ಬ್ರಂಮ-
12 . . ರ ಕೆಯಿಂ ತೆಂಕಲು . . . . . . . ಯಾಗೆ ಮಾಣಿಕೇಶ್ವರದ ಕೋಲಲು
13 . . ಡುಮತ್ತರು ಕೆಯಿ (ಕೆಯಿ) ಅಜುಗ್ಗೆಯ ನಿವೇಶಣದ ಮನೆ ಗಾಣಂಗಳಲ್ಲಿ ದುಚ್ಚೆಯ

14 . . ಸ್ವಸ್ತಿ ಸಮಸ್ತವಸ್ತುವಿಸ್ತೀರ್ಣ್ಣ[ಪುನೀ]ತಾರ್ಣ್ಣವನಿನದ ಪ್ರಣುತ . . ವಿಖ್ಯಾತ ವೀರಸಾ-
15 [ಸ]ನಲಬುಧಾನೇಕಗುಣ[ಗ]ಣಾಣ[1]ಂಕೃತರುಂ ಸತ್ಯ . . . . . ಚಾರುಚರಿತ್ರ
16 . . . ನಯವಿಜ್ಞಾನವೀರಬಣಂಜುಧರ್ಮ್ಮಪ್ರತಿಪಾಳರುಮಪ್ಪ ಬಣಜಿಗರು
17 . . . . . . . . . . ಬಡಮುಲೆಗೆ . . . . ಪಡುಮಾಱುವರ್ತ್ತ[ಕ]
18 . . . . . . . ನ ಎಲೆಯು ಹೇಱುಂಗೆ ಎಲೆ ೨[೫] ಹೊಂಗೆ ಅಡಕೆ [೨೫] ಹೊಂಗೆ ಅರಿಸಿನ ಪಲ ೫
19 . . . . ರೆ ಮೆಣಸು . . ಗಯಿದು ಗದ್ಯಾಣ ೨ ಹೊಂಗೆ ಸಬು . . .
20 . . . . . . ವಾನ ಯಿಂತಿನಿತುಮಂ
21 . . . . . . . . ಮಹೇಶ್ವರ ಮಾಣಿಕೇಶ್ವರದೇವ
22 . . . . ನಮಸ್ಯ . . . . . . ಗಣ ಮಠವನು
23 . . . . ಣಂಗಳು . . . . . . . . ಸ್ವದತ್ತಂ ಪರದತ್ತಂ
24 . . ರೇತ ವಸುಂಧರಾ ಷಷ್ಟಿ . . . . . ಹಸ್ರಾಣಿ ಮಿಷ್ಟಾಯಾಂ ಜಾಯತೇ ಕ್ರಿಮಿ
25 ಶ್ರೀ ಶ್ರೀ ಶ್ರೀ

## No. 204

*(B. K. No. 32 of 1934–35)*

ITGI, RANEBENNUR TALUK, DHARWAR DISTRICT

*Hero-stone set up near the temple of Basavaṇṇa*

### Siṁghaṇa—A.D. 1221

This inscription is dated in the cyclic year **Vishu** in the reign of **Siṁgaḷa**, **Jyeshṭha śu. [5], Thursday**, corresponding to **A.D. 1221, May 27, Thursday.** It records the death of **Mādaya-Nāyaka** of **Iṭage,** who died after rescuing the cows in a cattle-raid by **Malaya-Nāyaka** of **Kandagale**.

### Text

*First Piece*

1 ◎ ಸ್ವಸ್ತಿ ಸಮಸ್ತಪ್ರಸಸ್ತಿಸಹಿತ[ಂ] ಆದವನಾರಾಯಣ
2 ಪ್ರತಾಪಚಕ್ರವರ್ತ್ತಿ ಸಿಂಗಳೆರಾಜ್ಯದ( । ) ವಿಶುಸಂ[ವ]-
3 ತ್ಸರದ( । ) ಜೇಷ್ಟ ಸುಃದ್ಧ( । ) [೫] ಬ್ರಿ । ಕಂದಗಲೆಯ

*Second Piece*

4 ಕಾಲಾಳ ಮಲಯನಾಯಕನಱದು ತುಱುವಂ ಕೊ[ಂ]ಡಡೆ
5 ಯಿಟಗೆಯ ಕಂಚಿಯಬ್ಬೆಯ ಮಾದೆಯನಾಯಕ ತುಱುವಂ
6 ಮಗುಳ್ಚಿ ಸ್ವರ್ಗ್ಗಸ್ತನಾದ ॥ ಶ್ರೀ

1 Read ಲ.

## No. 205

(*B. K. No. 3 of 1934-35*)

ANTARAVAḶḶI, RANEBENNUR TALUK, DHARWAR DISTRICT

### Siṁghaṇa—A.D. 1226

This inscription is dated in the **19th year** of the reign of **Simhaṇadeva, Vyaya, Bhādrapada śu. 1**, corresponding to **A.D. 1226, August 25, Tuesday**.

It commemorates the death of **Rāmōja** of **Antaravaḷḷi** who died in a fight which took place in the presence of the *prabhus* and *gāmuṇḍas* of **Nūrumbāḍa** and **Sattaḷige-nāḍu** in connection with the boundary of **Halugere** and **Beḷugali**.

#### Text

*First Section*

1 ◎ ಸ್ವಸ್ತಿ ಶ್ರೀಮತು ಯಾದವನಾರಾಯಣಂ ಪ್ರತಾಪಭುಜಬಳ-
2 ಚಕ್ರವರ್ತ್ತಿ ಸಿಂಹಣದೇವ[ವ*]ರಿಶದ ೧೯ ಬ್ಯುಯಸ[ಂ*]ವ್ವತರದ ಭಾದ್ರ-
3 ಪದ ಸು। ೧ [ಲು] ನುಱುಂಬಾಡ ಸತ್ತಳಿಗೆನಾಡ ಸಮಸ್ತ ಪ್ರಭು ಗಾ-
4 ಮುಂಡಗಳು ಸಮಸ್ತ ಪರಿವಾರವುಂ ನೆರದು ಹಲುಗೆಱೆಯ ಬೆ-

*Second Section*

5 ಳುಗಲಿಯ ಸೀಮಾಸಮ್ಮ[ಂ ]ಧಕ್ಕೆ ಕಾಳೆಗವಾದಲ ಅನ್ತರವಳ್ಳಿಯ ಬಡಗಿ ಗೋ-
6 ವೋಜನ ಮಗ ರಾಮೋಜ ತಳುತಿಱಿದು ಮೆಱಿಮ ಸುರಲೋ-
7 ಕಪ್ರಾಪ್ತನಾದ ಮ[ಂ*]ಗಳ ಮಹಾಶ್ರೀ ಶ್ರೀ

## No. 206

(*B. K. No. 95 of 1932—33*)

HĀVĒRI, HAVERI TALUK, DHARWAR DISTRICT

*South wall of the temple of Purasiddhēśvara*

### Siṁghaṇa—A.D. 1227

This inscription is dated in the **19th year** of the reign of **Simhaṇadēva, Sarvajit, Śrāvaṇa śu. 11, Monday**, corresponding to **A. D. 1227, July 6, Monday**. It registers a gift made by **Jñānarāsideva** and others to a certain **Dāvaṇṇa**. It is damaged.

#### Text

1 ◎ ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರತಾಪಚಕ್ರವರ್ತ್ತಿ ಶ್ರೀಸಿಂಹಣದೇವ-
2 ದರುಶದ ೧೯ ತನೆಯ ಸರ್ವ್ವಜಿತುಸಂವತ್ಸರದ ಸ್ರಾವಣ ಸುಧ ೧೧ ಸೋಮವಾರದಂದು ಶ್ರೀಸಿ-
3 ಧನಾಥದೇವರ ಶ್ರೀಪಾದಪದುಮಾರಾಧಕರುಮಪ್ಪ ಜ್ಞಾನರಾಸಿದೇವರು ಮುಖ್ಯವಾಗಿ ಪಾತ್ರ ಪಾ-
4 ವುಳ ಸಿಧನಾಥದೇ[ವ*]ರ ದಾಸಿ ದಾವಂಣಂಗೆ ಬಿಟ್ಟ ಅರೆವಾಗ ದೆಲ್ಲ ಅದಿ ೨ ಫಳಿಸಿದಡಂ ಸಲಿಸು-
5 ವರು ಮೊಬರಿ ಗಾಳೆಯ ವಾಸಿಕಾಱ ಬಸವ ಮಪಲೆಗೆಲ್ಲೆ ಕಸಪಸಿದ ಅ[ವು]ಜಗೆ ದೀಜ ಸೂಡಾ-

6 ಽತ ಮಲ್ಲ ಇಂತಿವರು ಬಿಟ್ಟ . . . . .

7 ಶ್ರೀ ಶ್ರೀ

## No. 207

(*B. K. No. 87 of 1932-33*)

HĀVĒRI, HAVERI TALUK, DHARWAR DISTRICT

*Beam in the navaraṅga-maṇḍapa in the temple of Purasiddhēśvara*

**Siṁghaṇa—A. D. 1228**

This inscription is dated in the **18th year** of the reign of **Siṁhaṇadēva, Sarvadhāri, Chaitra śu. 7, Monday** corresponding to **A. D. 1228, March 13, Monday f. d. t. 21.** It records the gift of money made by **Dechchi-seṭṭi** and **Māyi-seṭṭi**, sons of **Maili-seṭṭi** of **Guḍiyabiḍu**, when *Mahāmaṇḍalēśvara* **Lakshmipāḷadēva** was the governor. The gift was entrusted to **Jñānarāsidēva**, for the worship, etc., of god **Svayambhu-Siddhanātha-dēva** of **Hāvari** (modern Hāvēri).

**Text**

1 ಸ್ವಸ್ತಿ ಶ್ರೀಮತು ಯಾದವನಾರಾಯಣ ಭುಜಬಳಪ್ರತಾಪಚಕ್ರವರ್ತ್ತಿ ಶ್ರೀಸಿಂಹಣದೇವ[ವ*]ರ್ಷದ
ಗಲನೆಯ ಸರ್ವ್ವಹಾ(ಧಾ)ರೀಚಸಂವತ್ಸರದ ಚೈತ್ರ ಶ ೭ ಸೋಮವಾರದಂದು ಶ್ರೀ
ಮನ್ಮಹಾಮಂಡಳೇಶ್ವ[ರ*]ನು ಸರಣಾಗತವಜ್ರಪಂಜರ ಶ್ರೀಲಕ್ಷ್ಮೀಪಾಳದೇವನ ರಾಜ್ಯ
ದಲು . . . .

2 [ಹಾ]ವರಿಯ ಶ್ರೀಸ್ವಯಂಭುಸಿದ್ಧನಾಥದೇ[ವ*]ರ ಶ್ರೀಕಾರ್ಯ್ಯಕ್ಕೆ ಸಮಸ್ತಗುಣಸಂಪಂನನಪ್ಪ
ಗುಡಿಯಬೀಡಿನ ಮೈಲಿಸೆಟ್ಟಿ(ಟ್ಟಿ)ಯ ಪುತ್ರರು ದೆಚ್ಚಿಸೆಟ್ಟಿ ಮಾಯಿಸೆಟ್ಟಿಯರು ಅಖಂ
ಡನಂದಾದೀವಿಗೆಗೆ ಗದ್ಯಾಣವೆರಡು ಪೂಜ್ಯಕ್ಕೆ ಗದ್ಯಾಣವೊಂದಂತು ಮೂಱು ಹೊಂಗೆ ವರ್ಷದ
ಬಡ್ಡಿ ಪಣ ವೊಂ[ದು] .

3 . ವಾಗಿ ಶ್ರೀಮದ್ರಾಜಗುರು ಜ್ಞಾನರಾಸಿದೇವರ ಕಯ್ಯಲು ಕೊಟ್ಟು ಈ . . ದಾಯಿನುಂ
ಬೆಸಸಿಯೆನಲು । ನಿಮಗೆ ಚಂದ್ರಾರ್ಕ್ಕನಸ್ಥಾಯಿಯಬರಂ ಸಲುತ್ತಮಿರೆ ಮಂಗಳ ಮಹಾ[ಶ್ರೀ]

## No. 208

(*B. K. No. 19 of 1933-34*)

BYĀḌGI, RANEBENNUR TALUK, DHARWAR DISTRICT

*Hero-stone lying in the temple of Siddhēśvara*

**Siṁghaṇa—A. D. 1228**

This damaged inscription referring to **Siṁgaṇadēva** is dated in the cyclic year **Sarvadhāri, Vai[śākha]**, Sunday. The *tithi* is lost. The month **Vaiśākha** in **Sarvadhāri** corresponded to **A. D. 1228, April-May.** It records the death of a hero (name lost) of **Bēḍage** (modern Byāḍgi), in a fight near **Kuṁchūr.**

### Text

*First Section*

1 ◎[ಶ್ರೀ]ಸ್ವಸ್ತಿ ಸಮಸ್ತಯುರಸವಿಪ್ಯಾ'ಳಾಪ ವೀರಸಿಂಗಣದೇವ ವ . . . .
2 ನೆಯ ಕ್ರಿತಾ[ಂ]ತಂ ಕೊಂಕಣಭಯಂಕರನುಂ ಶ್ರೀಮತು . . . . .
3 ಕಣದೇಸವನಾಳ್ತುಮುಂ ಶ್ರೀಮತು ಹೊಂನದೋ . . . .
4 ಳ್ಳಿಯ ಟಣಾಂತರಕೆ ಹೋಹಗಳು ಶ್ರೀಮ . . . . . .

*Second Section*

5 ಗರಿ ಕಂಚಿಕೊರ ಎಡೆಯಲ್ಲ ಕಾದಿ ಸರ್ವ್ವಧಾರಿಸಂವಚ್ಚರದ ವೈ . . . .
6 [ಮಿ]ಆದಿವಾರದಂದು ಬೇಡಗೆಯ ಮಡಿವಳರ ಮೆಯು[ತ]
7 . . . ದು ಸುರಲೋಕ ಪ್ರಾಪ್ತನಾದ ॥

## No. 209

(*B. K. No. 90 of 1932–33*)

HĀVĒRI, HAVERI TALUK, DHARWAR DISTRICT

*South beam in the navaraṅgamaṇḍapa in the temple of Purasiddhēśvara*

**Siṁghaṇa—A. D. 1228**

This inscription is dated in the **18th year** of the reign of **Siṁhaṇadēva, Sarvadhāri, Jyēshṭha śu. 3, Monday,** corresponding to **A. D. 1228, May 8, Monday.** It records a grant of money made by the merchants (*nakharas*) of **Hāvari**, for offerings to god **Vināyakadēva** (in the temple) of god **Svayaṁbhu-Siddhanāthadēva**. *Mahāmaṇḍalēśvara* **Lakshmipāḷadēva** is stated to be the governor at that time.

### Text

1 ಸ್ವಸ್ತಿ ಶ್ರೀಮತು ಯ(ಯಾ)ದವನಾರಾಯಣಂ ಭುಜಬಳಪ್ರತಾಪಚಕ್ರವರ್ತ್ತಿ ಶ್ರೀಸಿ[ಂ*]ಹಣದೇವವರುಸದ ೧೮ನೆಯ ಸರ್ವ್ವಧಾರಿಸಂವತ್ಸರದ [ಜೇ]ಷ್ಟ ಸುಧ ೩ ಸೋಮವಾರದಂದು ಸ್ವಸ್ತಿ ಸಮಸ(ಸ್ತ)ಪ(ಪ್ರ)ಸಸಿ(ಸ್ತಿ)ಸಹಿತಂ ಶ್ರೀಮನುಮಹಾಮಂಡಳೇಸ್ವರಂ ಸರಣ(ಣಾ)ಗತ–

2 ವಜ್ರಪಂಜರಂ ಶ್ರೀಲಕ್ಷುಮಿಪಾಳದೇವನ ರಾಜ್ಯದಲು ಶ್ರೀಮದನಾದಿಯಗ್ರಹಾರಂ ಹಾವರಿಯ ನಖರಂಗಳು ಶ್ರೀಸ್ವಯಂಭುಸಿದ್ಧನಾಥದೇವರ ವಿನಾಯಕದೇವರ ಉಪಹಾರಕ್ಕೆ ಕೊಟ್ಟ ಗದ್ಯಾಣ ನಾಲ್ಕಱ ೪ ವೃದ್ಧಿ ತಿಂಗಳಿಂಗೆ ಹಣವೊ–

3 ನ್ನಱಲು ವರುಸಕ್ಕೆ ಗದ್ಯಾಣ ೧ಮು ಏಮಂ(ಶ್ವಾ) ಸರಾಸಿದೇವರುಂ ಮಹಾ[ಜ*]ನಂಗಳು ಯಿ ಧರ್ಮ್ಮ ಮ ಆಚಂದ್ರಾರ್ಕ್ಕಾಂಬರಂ ಪ್ರತಿಪಾಳಿಸುವರು ಮಂಗಳ ಮಹ(ಹಾ)ಶ್ರೀ ಶ್ರೀ

---

1 Read ದ್ಯಾ.
2 Read ಹಾ

## No. 210

*(B. K. No. 112 of 1933- 3*

MÖTEBENNŪR, RANEBENNUR TALUK, DHARWAR DISTRICT

*Hero-stone built into the wall of the house of Banaṭappa Komaṭar*

**Siṁghaṇa—A. D. 1228**

This inscription is dated in the cyclic year **Sarvadhāri, Bhādrapada su. Pañc ami.** The week-day is lost. The details correspond to **A. D. 1228, August 6, Sunday.** The *tithi* commenced on Saturday at ·95 and ended on **Monday** at ·03.

It records the death of a hero named **Jakka** in a fight regarding the boundary of **Beṇṇevūr and Malavūr.** It also records the death of another hero, **Chavuḍa,** and states that **Boppa-gaṇḍa** and others of **Beṇṇevūr** made a grant of land in appreciation of his valour. The record is badly damaged.

### Text

*First Panel*

1 [ಸ್ವಸ್ತಿ] ಶ್ರೀಮತು ಸಿಂಘಣದೇವವರ್ಷದ ಸರ್ವ್ವಧಾರಿಸಂವತ್ಸರದ ಭಾದ್ರ[ಪದ] ಸುದ್ಧ ಪಂಚಮಿ .

2 . . . . . ಬೆಣ್ಣೆವೂರ ಮಲವೂರ ಸೀಮಾಸಂಮಂಧ ಕಲಹವಾದಲ್ಲಿ . . . .

3 . ಲು ಗೆಲ್ದಲ್ಲಿ ಬಾಹುಪ್ರತಾಪಿ ಮಡವರಿ ಜಕ್ಕಂ . . . . . . .

4 ನಲಿಉದು ಮೆಉದು ಸುಗತಿಗೆ ಸಂದಂ ॥ . . . . . .

*Second Panel*

5 . ಕನೆಮ . ಗುವಂಕೆ . . . . . ಪೆಲ್[ದಿ]ಱುವದಟಿಂ . . . **ವಾಡೆ** ಸುಗತಿವಡೆದಂ ಚೆ-

6 ವುಡಂ . . . . . . ಸುರಲೋಕ [ಪ್ರಾಪ್ತಿ] ಅಪ್ಪುದು ಶ್ರೀ . . . . . ಯೂರ ಬೊಪ್ಪಗಾಂಡ ಮುಖ್ಯವಾಗಿ

7 ಬೆಣ್ಣೆವೂರ ಪನ್ನಿರ್ವ್ವರು [ಗಾವುಂಡು]ಗಳುಂ ಮೆಚ್ಚಿ . . . . . . . , ಕೊ-

8 ಟ್ಟ ಭೂಮಿ ॥ ಬ್ರಹ್ಮದೇವನ ಭೂಮಿಯಿಂದ ತೆಂಕಲು . . ಗಂಗನ . . ಡುಲು ಕಂಮ . . ವಾಂ ಜೋಗಯನ

9 ಮಕ್ಕಳುಂ ಚವುಡೆಯನೊಡವುಟ್ಟುಗಳುಂ ಕೆಚ್ಚುಂಬರು ॥ ಮಾಡಿದಾಚಾರಿ ಬೆಣ್ಣೆಯ ಬಂವೋಜನು ॥

*Third Panel*

10 . . . . ವಿದ್ದ . . . . . . . ಯು . . . . .

## No. 211

(*B. K. No. 120 of 1932–33*)

KABBŪR, HAVERI TALUK, DHARWAR DISTRICT

*Hero-stone near the temple of Kallēśvara*

**Simghaṇa—A. D. 1230**

This inscription is dated in the cyclic year **Virōdhi**, during the reign of **Simhaṇadēva, Phālguṇa śu. Paḍiyā (Pratipadā), Friday,** corresponding to **A.D. 1230 February 15, Friday**. It records the grant of land made by the *mahājanas* of **Hāhari,** (modern Hāvēri) as *nettaru-gey* in memory of **Sōveya-Nāyaka**, son of **Chauṇḍaya-Nāyaka** who died in a fight at **Kabūru**.

**Text.**

1 ⊚ ಸ್ವಸ್ತಿ ಶ್ರೀಮತು ಯಾದವನಾರಾಯಣ ಭುಜಬಳಪ್ರತಾಪಚಕ್ರವರ್ತ್ತಿ ಶ್ರೀ-
2 ಸಿಂಘಣದೇವವರುಷದ ವಿರೋಧಿಸಂವತ್ಸರದ ಫಾಲ್ಗುಣ
3 ಸುಧ ಪಡಿಯಾ ಸುಕ್ರವಾರದಂದು ಶ್ರೀಮದನಾದಿಯ
4 ಅಗ್ರಹಾರಂ ಹಾಹರಿಯ ಆಶೇಷ ಮಹಾಜನಂಗಳಾ-
5 ಳು ಕ[ಬು]ರನು ಮಂನೆಯ ಗಂಗಿ[ದೇವ]ರ ಕ.-

*Second Section*

6 ರ . . ಕಾದುವಲಿ . . ಕರದ ಚಾಂಡಯನಾಯಕನ ಮಗ ಸೋವೆಯ-
7 ನಾಯಕನು ತಲೆಗೊಟ್ಟದಕೆ ನೆತರುಗೆಯ್ಯಾಗಿ ಕೊಟ್ಟ ಕೆಯಿ ಕರಿಯಕೆಱೆಯ
8 [ಮೇಲು] ಕಮ್ಮ ೨೦ ಆಚಂದ್ರಾರ್ಕ್ಕತಾರಂಬರಂ ಸಲುತ್ತಮಿರ್ಕ್ಕೆ [॥]

## No. 212

(*B. K. No. 89 of 1932-33*)

HĀVĒRI, HAVERI TALUK, DHARWAR DISTRICT

*North beam of the navaraṅgamaṇḍapa in the temple of Purasiddhēśvara*

**Simghaṇa—A. D. 1230**

This inscription is dated in the **22nd year** of the reign of **Simhaṇadēva, Vikṛita, Jyēshṭha śu. Pūrṇimā, Monday, lunar eclipse,** corresponding to **A. D. 1230, May 27, Monday, f.d.t. ·55.** The lunar eclipse occurred on the following Tuesday. It registers a gift of two *gadyāṇas* made by **Jāyidēva-Nāyaka** son of **Rā[vu]vāṇeya-Nāyaka,** for burning a perpetual lamp to god **Siddhēśvara** of *anādiyagrahāra* **Hāvēri. Kannuva-Nāyaka** is stated to be the protector of the gift.

**Text**

1 ⊚ ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರತಾಪಚಕ್ರವರ್ತ್ತಿ ಶ್ರೀಸಿಂಘಣದೇವ ವರ್ಷದ ೨೨ ಡನೆಯ ವಿಕ್ರಿತಸಂವತ್ಸರದ ಜೇಷ್ಟ ಸು ಪುಣ್ಣಮಿ ಸೋಮವಾರ ಸೋಮ ಗ್ರಹಣದಂದು ಶ್ರೀಮತು . . .

2 ಯಕಜೀವರಕ್ಷಪಾಳಕ ರಾಯನಾಯಕಗಜಸಿಂಹ ಬಿಡಗಾರಾಬ . . ವಂಬ ರಾವುತಾಣೆಯ ನಾಯಕರ ಸುಪುತ್ರ್ಯಾಂ॥ ಜಾಯಿದೇವನಾಯಕ ಶ್ರೀಮದನಾದಿಯಗ್ರಹಾರಂ ಹಾವೇರಿಯ

3 ಧ್ಮೇಸ್ವರದೇವ ನಂದಾದೀವಿಗೆಗೆ ಆಚಂದ್ರಾರ್ಕ್ಕತಾರಂಬರಂ ನಡೆವಂತಾಗಿ ಬಿಟ್ಟ ಗದ್ಯಾಣ ಯೆರಡು ಪ್ರತಿಪಾಳ[ಕ] ಕನ್ನುವನಾಯಕರು ಮಂಗಳ ಮಹಾಶ್ರೀ ಶ್ರೀ ಸಿದ್ಧನಾಥ ಶರಣು ।

## No. 213

*(B. K. No. 169 of 1932–33)*

SANGŪR, HAVERI TALUK, DHARWAR DISTRICT

*Hero-stone in the fort on the way to the Varadā river*

**Siṁghaṇa—A.D. 1233**

This inscription is dated in the **25th year** of the reign of **Siṁgaṇadēva, Nandana, Phālguṇa ba. 3, Tuesday,** corresponding to **A.D. 1233, February 28.** The week-day was, however, **Monday.** It records a grant of land given as *nettaru-gey* by **Sōva-gauḍa** in memory of the carpenter **Sātōja** who fought and died during a cattleraid by **Īśvaradēva** when the latter attacked **Chaṅgūr** (modern Sangūr). Īśvaradēva is called **Sinda-Gōvinda.**

**Text**

1 ಠ ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರತಾಪಚಕ್ರವರ್ತ್ತಿ
2 ಶ್ರೀ ಸಿಂಗಣದೇವವರುಷದ ೨೫ ನೆಯ ನಂದನಸಂವಛರದ ಫಾಲ್ಗುಣ ಬ ೩
3 ಮಂಗಳವಾರದಂದು ಶ್ರೀಮತು ಸಿಂದಗೋವಿಂದ [ಈ]ಸ್ವರದೇವ ಚಂಗೂರನಿಱ-
4 ದು ತುಱುವ ಕೊಂಡು ಹೋಹಲ್ಲ ಬಡಗಿ ಸಾತೋಜ ತಾಗಿ ತಳ್ತಿಱಿದು ತುಱು-
5 ವಂ ಮರಳ್ಚಿ ಸುರಲೋಕಪ್ರಾಪ್ತನಾದಲ್ಲ ॥ ಶ್ರೀಮತು ಸೋವಗೌಡನಂ ಸಮಸ್ತ ಪ್ರ-
6 ಜೆಗಳುಂ ಮುಕ್ತವಾಗಿ ಕೊಟ್ಟ ನೆತರುಗೆಯ ಕಂಬ ೨೦ ಕವಳಗೆಱೆಯಲ ಗ-
7 ಡಿಯ ಹೊಲನಂ ॥।

## No. 214

*(B. K. No. 33 of 1932–33)*

DĒVĪHOSŪR, HAVERI TALUK, DHARWAR DISTRICT

*Broken slab in the temple of Banaśaṅkari*

**Siṁghaṇa – A. D. 1233**

This inscription is dated in the **27th year of the reign of Siṁgaṇadēva, Jaya, Śrāvaṇa śu. 2, Sunday, Saṁkramaṇa.** In the cyclic year **Jaya** there were two **Śrāvaṇas** and in neither did **śu. 2** fall on Sunday nor was there any saṁkramaṇa. But in the previous year Vijaya, Śrāvaṇa śu. 2 did fall on Sunday though there was no saṁkramaṇa on that day. In Vijaya, the details work out correctly to A. D. 1233, July 10, Sunday.

1 Read ತ್ಸ.

It records a gift of taxes made to the one-thousand *Mahājanas* and *Mummuridaṇḍas* of *anādiyagrahāra* **Dēviya-Hosavūr.** A certain Gōvindadēva and Lakumaṇa are mentioned. The latter is stated to be the *Suṁkavergaḍe* of the governor of **Bāsavūr One-hundred-and-forty.**

The inscription is broken and damaged.

**Text**

1 ⊚ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋ[ಕ್ಯ]-
2 ನಗರಾರಂಭ[ಮೂ]ಲಸ್ತಂಭಾಯ ಶಂಭವೇ ॥ ಸ್ವಸ್ತಿ [ಶ್ರೀಮ]-
3 ತು ಯಾದವನಾರಾಯಣಂ ಭುಜಬಳಪ್ರತಾಪಚಕ್ರವ[ರ್ತ್ತಿ]
4 ಸಿಂಗಣದೇವವರ್ಷ ೧[೮]ನೆಯ ಜಯಸಂವತ್ಸರದ [ಫಾ]
5 ಸುದ್ಧ ೫ ಯಾದಿವಾರ ಬ್ಯತೀಪಾತ ಸಂಕ್ರಾಂತಿಯು[ಂದು] . . .
6 ನ್ವಯನಪ್ಪ . . [ದೇ]ವರಸರುಂ ಸ್ವಸ್ತಿ ಶ್ರೀಮನ್ಮಹಾ . . .
7 ರಾಯನಾಯಕಜೀವರಬ್ಬ ಗಜಸಿಂಹ . . . .
8 ದೇವ[ಂ]ಗೇರಿಯ ನೆಲೆವೀಡಿನೊಳು ಬಾಸವೂರ ನೂಱನ . .
9 ಬಸಂಕಥಾವಿನೋದದಿಂದಾಳುತ್ತಮಿರಲಾತನ . . . . .
10 ಸುಂಕವೆರ್ಗ್ಗಡೆ ಲಕುಮಣ . . ರಾಯದೇವನು . . . .
11 ಶ್ರೀಮದನಾದಿಯಗ್ರಹಾರಂ ದೇವಿಯಹೊ . . . . . .
12 ಮಹಾಜನ ಮುಂಮುರಿದಂಡಂಗಳಿಗೆ ಕೊಟ್ಟ . . . .
13 ಕ್ಕಲು ಮಯದೆಜೆ ಎತ್ತುಕತ್ತೆ ಕೋಣ ಅಂಗಡಿಗ . . .
14 ವಸಾಸಿರ್ವ್ವರು ಮುಂಮುರಿದಂಡಂಗಳು . . . .
15 ಲಸೆಯ ಗೋವಿಂದದೇವನು ಗಳಿಗೆಯ . . . . .
16 . . ಜೇಶ್ವರದೇವರ ಮುಂದೆ ಹೊಡೆದ ಶಾಸ[ನ]
17 . . . . . ರು ೧೨ ಗವಜೇಶ್ವರ . . . . . .
18 . . . ರಜ[1] . . . . . . .

## No. 215

(*B. K. No. 1 of 1934-35*)

ANTARAVAḶḶI, RANEBENNUR TALUK, DHARWAR DISTRICT

*Hero-stone set up near the temple of Basavaṇṇa*

**Siṁghaṇa—A.D. 1234**

This inscription is dated in the **18th year** of the reign of **Siṁghaḷadēva. Vijaya, Phālguṇa śu. Pañchami, Monday,** corresponding to **A. D. 1234, February 5.** The *tithi* however ended on Sunday at .03. But **ba. Pañchami** of that month fell on Monday, February 20.

It commemorates the death of **Bamma-gauṇḍa** of **Aṁtaravaḷḷi,** who died in the fight at **Ulihaḷḷi** when **Pāṇḍyadēva** raided the place. **Aṁtaravaḷḷi** is stated to be in the division of **Nāṟumbāḍa**.

1 The continuation is lost.

### Text

*First Section*

1 ಸ್ವಸ್ತಿ ಶ್ರೀಮತು ಯಾದವನಾರಾಯಣಂ ಪ್ರತಾಪಭುಜಬಳಚಕ್ರವರ್ತ್ತಿ ಶ್ರೀಸಿಂ-
2 ಘಳದೇವವರುಸ ದ ೧೮ ವಿಜೆಯಸಂವತ್ಸರದ ಫಾಲ್ಗುಣ ಸುಧ ಪಂಚಮಿ ಸೋ-
3 ಮವಾರದಲು ನೊಜುಂಬಾಡದ ಅಂತರವಳ್ಳಿಯ ಸ್ಥಳದ ಕುಜುಬರ ಕಾಟಗಾ-
4 ಡ ಕಂಚಗೌಂಡಿಯ ಮಗ ಬಂಮಗಾಡ ನಾಡೋದಿ ಪುಲಿಹಳ್ಳಿಯಲದಲ ಪಾಂ-

*Second Section*

5 ಡ್ಯದೇವನವರು [ಪು]ಲಹಳಿಯನಿಜುದಲ್ಲಿ ತುಜುವಂ ಮರಳ್ಚಿ ತಳುತಿ-
6 ಜದು ಮೆಜೆದು ಬಂಮಗೌಡ ಸುರಲೋಕಪಾಪ್ತನಾದ ॥
7 ಮಂಗಳ ಮಹಾಶ್ರೀ ಶ್ರೀ ◎ ◎

### No. 216

(*B. K. No. 122 of 1933–34*)

BIJĀPUR, BIJAPUR TALUK, BIJAPUR DISTRICT

*Pillar at the south entrance of Ark-killah*

**Simghaṇa—A. D. 1234**

This inscription referring itself to the reign of **Simghaṇadēva** is dated in **Śaka 1156, Jaya, Vaiśākha su. ūrṇimā, Vaḍḍavāra** (**Saturday**), corresponding to **A.D. 1234, April 15, Saturday**. At the end of the record, the grant is stated to have been made on the occasion of a lunar eclipse. As there was no lunar eclipse on the date cited, it apparently refers to the lunar eclipse which took place in the previous month *i.e.*, on March 17, Friday.

It registers a remission of taxes on certain articles for the worship and offerings of god **Narasimhadēva** of **Vijayāpura** (modern Bijapur) also called **Dakshiṇa-Vārāṇasi** when **Tikkarasa** was the *Sarvādhikāri* of **Taddavāḍi, Heḍa** and **Kaṇabaḍe** provinces. The donor was *Mahāpasāyita*, *Suṁkādhikāri* **Vimchuvadēvarasa**.

### Text

1 ಪಂಚಶ್ರಿಸೊತ್ರಸವಾ ಯಾಪ್ರಥಾಮುಖ್ಯಮಪರಾಜನ ಸೇವ-
2 ತೇ ಶ್ರೀರಸಿಂಹಥಕಾ್ಯ ಪಶ್ಚಿಮೇ ವಿಜಯಾಪುರೇ[1] ಸ್ವಸ್ತಿ ಶ್ರೀಮ-
3 ತು ಯಾದವನಾರಾಯಣ ಪ್ರತಾಪಚಕ್ರವರ್ತಿ ಸಿಂಘಣದೇವ-
4 ರಾಜ್ಯಾಭ್ಯುದಯ ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ
5 ಸಲುತ್ತಮಿರೆ ಸಕವರುಷ ೧೧೫೬ ನೆಯ ಜಯಸಂ-
6 ವತ್ಸರದ ವೈಸಾಖ ಸುದ್ಧ ಪುಂಣಿಮೆ ವಡ್ಡವಾರದಂದು ಶ್ರೀಮ-
7 ದಕ್ಷಿಣವಾರಣಾಸಿ ವಿಜಯಾಪುರದ ಶ್ರೀನರಸಿಂ-
8 ಹದೇವರಿಗೆ ಕೊಂಡೆಯರ ಗಂಡ ತಿಕ್ಕರಸನು ತದ್ದವಾಡಿ ಹೆಡ ಕಣಬಡೆ-

1 This verse is faulty.

9 ಯಂತು ಮೊಱಬುನಾಡನು ಶ್ರೀಭೋಗಾಧ್ಯಂತರಂ ಸರ್ವ್ವಾಧಿಕಾರ-
10 ವಂ ಮಾಡುತ್ತಮಿರಲು ಯವರ ಶ್ರೀಮನುಮಹಾಪಸಾಯಿತಂ
11 ಸುಂಕಾಧಿಕಾರಿ **ಬಿಂಚಿಅವದೇವರ(ಂ)ಸರು** ಶ್ರೀಮತು
12 ದಕ್ಷಿಣವರಣಾಸಿ ವಿಜಯಪುರದ ಶ್ರೀನರಸಿಂಹದೇವರ
13 ಯಂಗಭೋಗ ರಂಗಭೋಗ ಚೈತ್ರಪವಿತ್ರಕೆ ಯೆ[ಂ]-
14 ದು ೫೦ ಎತ್ತುಯಡಕೆ ಯಲ್ಲ ಮೆಳಸು ಯರಿಸಿನ
15 ಪಟ್ಟೆಕರ್ಪ್ಪೂರ ಭೂಸ ವಿದಳ ಮುಬ್ಬ ಯಾವ ಗಂಡವ ಹೇಱು-
16 ತಂದು ಮಾಱಿದಡಂ ಸು[ಂ*]ಕ ಪರಿಹಾರ ಮತ್ತಂ ಯಾ
17 ದೇವರ ಕಂಮಟ ಯಾವ ಪೊರಲ ಮಾಡಿದಡಂ ಆ ಧತ್ತ ಭಂ-
18 ಡಿ ಎತ್ತಿನಲಿ ಬಂದ[ಂ]ತಹಾವಕ್ಕೆ ಸುಂಕದಾಹಿರಸೀಮೆ ಎಂ-
19 ದೆನಬಾರದು ಮತ್ತಂ ಆ ದೇವರ ಪಸು ಎಂಮೆ ಯೆತ್ತು ಕುದು-
20 ರೆ ಜೀವದನ ಯೇನುಮಾಱಿದಡಂ ಮಾಱಿಕೊಂಡಡಂ ಸು[ಂ*]ಕಪ-
21 ರಿಹಾರ ಮತಂ ದೇವರ ಪೂಜಾರಿಗಳು ಆವ ಕೋಟವ ಮಾಡಿ
22 ದಾಡು ಕಾಯ ಮಾಱಿದಡಂ ಸುಂಕಪರಿಹಾರ ಯೆಂ-
23 ದು ಸೋಮಗ್ರಹಣದಲು ಸರ್ವ್ವಬಾಧೆಪರಿಹಾರವಂ ಮಾ-
24 ಡಿ ಬಿಟ್ಟರು ಮಂಗಳ ಮಹಾಶ್ರೀ ಶ್ರೀಶ್ರೀ ಮತ್ತಂ ಶ್ರೀನರಸಿಂ-
25 ಹ್ಮದೇವರ ಆಳ್ಕೆಯ ಹೊಸಹಳ್ಳಿಲು ಕುಱಿ-
26 . . ಧತ್ತ[ವಂದು]ಎತು ಕೆಲವಾಡಕುಡಿಕೆಯ ಕಱು
27 . . . . . ಸಹ ಶ್ರೀನರ[ಸಿಂಹ]ದೇವರದು ಮಂಗಳಂ

## No. 217

*(B. K. No. 64 of 1934-35)*

SARVAND, RANEBENNUR TALUK, DHARWAR DISTRICT

*Hero-stone standing near the Īśvara temple*

**Siṁghaṇa—A. D. 1235**

This inscription is dated in the cyclic year [Jaya] in the reign of **Simhaṇadēva,** (regnal year lost), **Māgha su. 3, Monday**. During the reign of Siṁghaṇa, the cyclic year Jaya coincided with A·D· 1234–35, in which year the details correspond to **A.D. 1235, January 22, Monday, f.d.t.·35.**

It records the death of a hero named **Jakkayya**, son of **Bairaḍiya Mādayya,** while rescuing the cattle. The village **Sarevūr** is mentioned.

### Text

*First Piece*

1 ಸ್ವಸ್ತಿ ಶ್ರೀಮತು ಯಾದವನಾರಾಯಣ ಪ್ರತಾಪಚಕ್ರವರ್ತ್ತಿ ವೀರ[ಸಿಂ]-
2 ಹಣದೇವವ[ರ್ಷ]ದ . . ನೆಯ [ಜಯ]ಸಂವತ್ಸರದ ಮಾಘಮಾಸ
ಸು ೩ ಸೋ[ಮವಾ]-

4 ಸಿರಾಯುವನಖಂಡಾನನ್ದಸಂಪ್ರೀತಿಯಂ ವಸ್ತುಸ್ತೋಮಮನುದಗ್ರಕೀರ್ತ್ತಿಯನುದಾರ್ಯೈಶ್ವರ್ಯ್ಯ
ಮಂ ಶೌರ್ಯ್ಯ[ಮಂ]

5 ವಿಸ್ತೀರ್ಣ್ಣಾರ್ಣ್ಣವನೇಮಿಮಂಡಳಕ್ಕನುದಿನಂ ಕೊರ್ತ್ತಿಗೆ ಮುಕ್ತೀಶ್ವರನು ॥ ಸ್ವಸ್ತಿ ಸಮಸ್ತಸುರಾಸುರ
ಕಿರೀಟಕೋಟಿಖಚಿತಮಣಿಮರೀಚಿರೋಚಿಧಾವ-

6 ವಿರಾಜಿತಚರಣಂ ಅಚಿಂತ್ಯಗುಣಾಭರಣಂ । ಅನಂತಬ್ರಹ್ಮಾಂಡಷಂಡಮಂಡನಿಜಭವನಂ । ಇಚ್ಛಾ
ಮಾತ್ರಕೃತಚತುರ್ದ್ದಶಭುವನಂ ।

7 ಋಗ್ಯಜುಸ್ಸಾಮಾಥರ್ವ್ವವೇದವೇದಾರ್ತ್ಥಸ್ಮೃತಿಪುರಾಣಧರ್ಮ್ಮಶಾಸ್ತ್ರೋಪಗೀಯಮಾನಶುಭಚರಿತಂ।
ನಿಜಶಕ್ತಿಕಳಾಮಂತ್ರವಿಮೋಹಿತ-

8 ಲೀಲಾಚರಿತಂ । ಪ್ರಮಥಗಣಮಾನಸಸರೋಜರಾಜಹಂಸಂ । ಸಮುತ್ತುಂಗಜಟಾಜೂಟ[ವಿ]ಭೂಷಿತ
ಚಂದ್ರಕಳಾವತಂಸಂ । ಶ್ರೀಪಾರ್ವ್ವತೀ-

9 ವದನಸರಾಜಮಿತ್ರಂ । ಶರಣಾಗತತಾಪತ್ರಿತಯರೌದ್ರವಿದ್ರಾವಣಕಾರುಣ್ಯಛತ್ರನಪ್ಪ ಶ್ರೀಮನ್ಮಹಾ
ದೇವಂ ದಿವ್ಯಸಿಂಹಾಸನಾರೂ-

10 ಢನಾಗಿ ಪಾರ್ವ್ವತೀಸಹಿತಮಿರೆ ನಂದಿ ನಂದಿನಾಥ ವೀರಭದ್ರ ಭದ್ರಕಾಳ ಮಹಾಕಾಳ
ಭೃಂಗೀಶ ಪ್ರಮುಖಾಸಂಖ್ಯಾತಗಣಂಗಳಿಂ ಸಂಸೇವ್ಯಮಾ-

11 ನನಾಗಿ ಶ್ರೀಕಯಿಳಾಸದಲ್ಲಿ ವಡ್ಡೋಲಗಂಗೊಟ್ಟು ಸುಖಸಂಕಥಾವಿನೋದದಿಂದಿದ್ದ ಸುಪ್ರಸ್ತಾವ
ಸಮಯದೊಳು ಆ ಉಮಾಮಹೇಶ್ವರಂ ಗ-

12 ಣಂಗಳಿಗೆ ಪ್ರಸಂನನಾಗಿ ಯಿಂತೆಂದಂ॥ ಇದೆ ನಾಲ್ಕುಂ ವೇದಪಾರಂ ಬಗ(ಗೆ)ವಡೆ ದಿಟದಿಂ
ಸರ್ವ್ವಶಾಸ್ತ್ರಾರ್ತ್ಥಪಾರಂ ಪದಪಿಂ ಸ್ಮೃತ್ಯರ್ತ್ಥಪಾರಂ ತ್ರಿಭುವನಭುವ-

13 ನಜ್ಞಾನವಿಜ್ಞಾನಪಾರಂ । ಸದ್ವಾಕ್ಯಾರ್ತ್ಥೈಕಪಾರಂ ಪ್ರಣವಸಮುದಿತಂ ಧ್ಯಾನಭಾವೈಕಪಾರ[ಂ]
ವಿದಿತಂ ಶ್ರೀಜ್ಯೋತಿಲಿಂಗಾಮರಗಣಕರುಣೋತ್ಪನ್ನಭಕ್ತಿಪ್ರ-

14 ಸಾದಪ್ಪ ॥ ಎನೆ ಕೇಳ್ದು ದ್ವಿಜ ಬಿಂನಪಂ ಶಿವ ಜಗಕ್ಕೀ ಮಾರ್ಗ್ಗಮನ್ತೋಱಬೇಕ್ಕೆನಲನ್ದಾ ಪ್ರಭು
ನನ್ದಿನಾಥನ ಮೊಗನ್ನೋಡಲ್ಕೆ ಶ್ರೀಸಂಗಮೇಶನ ಪುತ್ರಂ

15 ಬಸವಯ್ಯ ಬಿಂತನದಱಿಂ **ಶಿವಮುದ್ದುದೇವಂ** ಜನಕ್ಕನಿಮಿತ್ತಂ ಶಿವದೇವನಾಗಿಯು ಗಣಶ್ರೀಪಾದ
ಮನ್ತೋಱುವೆಂ ! ವ॥ ಅದೆಂತೆಂದಡೆ ॥ ಕಂ॥ ಅವನ-

16 ತಕಂಧರರಾಗಿಯೆ ದಿವಿಜರ್ಶಿವರಾತ್ರಿಮಾಡಿದಾ ತತ್ಪದದೊಳ್ ಧವಳೇಶ್ವರಾಖ್ಯಲಿಂಗದೊಳವಿರಳ
ಶಿವಮುದ್ದುದೇವಮುನಿಪತಿಯಿಪ್ಪನು ॥ ಅ-

17 ಬ್ಯಕ್ತಶಂಕರನನತಿಸುಬ್ಯಕ್ತಂ ಮಾಡಿ ತೋರ್ಪ್ಪನೆನುತೀ ಜಗದೊಳ್ । ದಿಬ್ಯಧವಳೇಶಲಿಂಗವನಬ್ಯಯ
ಶಿವಮುದ್ದುಮುನಿವರಂ ಭಾವಿಸುವನು ॥ಶಿವ[1]ಮುದ್ದು-

18 ಬ್ರತಿಪತಿಗೀ ದಿವಿಜೇಂದ್ರಪದಗಳೆಂಬವೇಂ ಪಾಸಟಿಯಾ ಭವನೆ ಕಲಿಕಾಲಕಲುಷವ [ತ]ವಿಸುವ
ನೆವದಿಂದ ಮೂರ್ತ್ತಿಯನಾಳ್ದರ್ದ್ದನು ॥ ಕೇಶವಜಿನ-

19 ಬೌದ್ಧಾದಿಗಳೀಶನ ಕಿಂಕರರು [ಬೇ]ಱೆ ದೇವತೆಯಲ್ಲೆಂದಾ ಶಿವಮುದ್ದುಬ್ರತಿಪ ಮಹೇಶನನೊಲಿದಾಲಿ
ಸಿದಂ ಜಗತ್ರಯಮಱಿಯಲು ॥ ಅಮ-

20 ರಗಣಚರಣಕೋಮಳವಿಮಳದಕೋ[ತ್ಪು]ಲ್ಲಕಮಳಯುಗಳಪರಾಗ( । )ಪ್ರಮುದಿತಮನದ್ವಿರೇಫೋಪ
ಮೆಯಿಂ ಶಿವಮುದ್ದುದೇವಮುನಿಪತಿಯಿಪ್ಪಂ

21 ॥ವ॥ ಅನನ್ತರವು ಶ್ರೀಗಿರಿನಿವಾಸನಾಜ್ಞೆಯಿಂ ಬಂದ ವೀರಬ್ರತಿಯಂ ನೋಡಿ॥ ವೃ॥ ಹವಣಸದಾರದ
ಗ್ರಜಕುಲೋದ್ಭವನಾಗಿ ವಿಧಾತ್ರನಿಂ-

22 ದ ಸಂಭವಿಸಿದ ನಾಲ್ಕು ಸೃಷ್ಟಿಯೊಳು ಪುಟ್ಟಿದನೆಂಬಡೆ ಜಾಯತೇಸ್ತಿಯೆಂಬವು ಮೊದಲಾದ [ಷಡ್ವಿ]
ಕೃತಿಯೊಳ್ಕಲೆ ಕೂಡಿದನಲ್ಲ ಭಾವಿ-

---

[1] The letter ಶ is written in cursive form above the line.

23 ಸಬ್ಬವನೊಲವಿನ್ದ ವೀರಶಿವದೇವಗಣೇಶ್ವರನಾಗಿ ಕೋಱದನ್ ॥ವ॥ಎನ್ದು ತನ್ನೊಳ್ಪರಿಭಾವಿಸಿ ಯಿಂ
ತೆನ್ದಂ॥ ಸುರನದಿಯೆ ತುಂಗ–

24 ಭದ್ರಾವರನದಿ ಸುರಸಮಿತಿ ವಿಪ್ರಗಣನಿಕರವ್ವ[1]ಅ ಸುರಗಿರಿ ಮಹೇಶಭವನವು ಧರೆಯೊಳ್ಕೈಲಾಸವೆನಿಪ
ಮುಕ್ತಿಕ್ಷೇತ್ರವು ॥

25 ಆ ಮುಕ್ತಿಕ್ಷೇತ್ರದೊಳಿರ್ದ್ದೀ ಪ್ರೆಮೆಯ ಮೆಱೆಯದೇಕೆನುತ ಗುರು ನುಡಿಯಲ್ । ಸ್ವಾಮಿ
ಮುಕುಟೇಶನೆ ಪರ[ಂ]ಧಾಮ ಶ್ರೀಜ್ಯೋತಿನೆಂದೊಲ–

26 ವಿನ್ದಂ॥ವ॥ ಶಕವರ್ಷ ೧೧೪೮ನೆಯ ಪಾರ್ತ್ಥಿವಸಂವತ್ಸರದ ಭಾದ್ರಪ[ದ*] ಶುದ್ಧ ೧೫
ಸೋಮವಾರ ಚಂದ್ರೋಪರಾಗ ಪುಣ್ಯತಿ–

27 ಥಿಯ ಮಧ್ಯಾಹ್ನ ಸಮಯದೊಳು ಬಂದು ಮುಕ್ತಿಕ್ಷೇತ್ರಮಂ ಪೊಕ್ಕು॥ಕಂ॥ ವಿರಚಿಸಿದಂ ಕೈಲಾಸದ
ಚರಿತ್ರಮಂ ವೀರಭದ್ರನ ಶ್ರೀ–

28 ಪದಮಂ(।)ಸ್ಮರಿಸುತ ವೀರವ್ರತಮಂ ಧರಿಸಿದನತುಳಬಳವಿಕ್ರಮಂ ಶಿವನು ॥ ಸೀಮೆಯನುಲ್ಲಂಗಿ[2]
ನಡುವೆ ನೇಮಂ ಧರೆಗೊಱಗದಿಪ್ಪ–

29 ದೆ ಸಲೆ ನಿಯಮವು । ಕಾವಿಸದಿಪ್ಪುದೆ ನೇಮಂ ಸ್ವಾಮಿ ಮಹಾದೇವನಿತ್ತಡೊಲ[ದೆ] ನೇಮಂ ॥
ಅದಱ[ಟ]ದ ಭೂತಂಗಳ ಬೆದಱಿಸಿ ಬೆನ್–

30 ಟ್ಟ[ಕು]ಟ್ಟಿದಂ ಭೈರವನಂ। ಕೆದಱುವ[ಬೆಂತರದೆಯ್ವ]ವನೊದೆದಂ ವೀರೇಶನಾತ್ಮಜಂ ಶಿವದೇವನು॥
ಮಾ[ರಿ]ದೊಱೆಯಾಗಿ ಲಿಂಗದ ಸಾರೆವರಂ ಬ–

31 ರಲು ತುಂಗಭದ್ರೆಯ ಪಡಕೋ ಸಾರೆನ್ತು ಱಱಿದು ನೋಕಿದ ವೀರಗಣಂಗಳ ಕುಮಾರನೀ ಶಿವ
ದೇವನೂ॥ ಶಿವಪದಮನೆಯ್ದು–

32 ವಡೆ ಮಾರ್ಗ್ಗವಿವೆಯೆನುತ್ತಖಿಳಜಗಕೆ ಕೋಱುವ ನೆವದಿನ್ದವಿರಳವಾಗಿರೆ ನಲವಿಂ ಶಿವಕಟ್ಟೆಯ ಕಟ್ಟಿ
ಕೋಱದಂ ಶಿವದೇವನು ।

33 ಹವಣಿಸಲರಿದೆನಿಸುವ ಶಿವಕವಿಳಾಸವನಖಿಳದೇವತಾಪದಸಹಿತೀಭುವನಕ್ಕೆ ತಂದು ಶಿವಸುಖಭವನದ
ನೆವದಿನ್ದರಚಿಸಿದಂ ಶಿವದೇವ[ಂ]

34 ॥ತ್ರಯಿಯಂ ನೆರೆಗೊಳ್ಸಿದವೊಲ್ತ್ರಯಂಗದಿಂ ಮೂಱು ಭವನಮ ನಿಲಿಸಿದವೊಲ್ತ್ರಯಿಭುವನಿಕೆಯಿಂ
ಕುದ್ರಪ್ರಿಯಭವನವನೊಲಿದು

35 ಮಾಡಿಸಿದ ಶಿವದೇವನು ॥ ಅಕಳಂಕಂ ಬರೆ ಮೂಲೋಕವಱಿಯೆ ಜೀರ್ಣ್ಣವಾದ ಶಿವಭವನವ
ಮತ್ತಾಕಳಸಂಬೆರೆ ಶಿಲೆಯಿಂ ಲೋಕೋತ್ತಮವಾಗಿ ಮಾ–

36 ಡಿಸಿದ ಶಿವದೇವನೂ ॥ ಶಿವದೇವಬ್ರತೀಂದ್ರನ್ಗೆ ಲಿಂಗಾರ್ಚ್ಚನಕಳಾಲವಂ । ಅಚಿಂತ್ಯ[ಂ] ಸರ್ವ್ವ
ಶಾಸ್ತ್ರಾರ್ತ್ಥೈರನೌಪಮ್ಯಮಗೋಚರಂ ॥ ಅಳ್ಬುಳ್ಬುಯಿರೂ–

37 ದ್ರೇಕಳದ್ವ ದಿಡಭಕ್ತಿ ಭಾವಸಂಪನ್ನೋ (।) ಕಳಿಬಳಕುಳ[ಶ್]ಮ್ಮಹನ್ತೋಬಳ ಸಗ್ಗುಣ[ನಾ]ಯ
ರೋ ಭವೋಬ್ಬು ಶಿವದೇವೋ ॥ ಅಱುಂ ದರ್ಶನಮಂ

38 ಸಲೆ ಮೀಱು ಮೆಱೆವ ಶಿವಗಣಾಜ್ಞಾಚಿಂತಾಮಣಿ ಕಯಿ ಸಾರೆ ಶಿವದೇವಮುನಿಪತಿ ಕೋಱು ಮೆಱದ
ಲಿಂಗಜಂಗಮೈಕ್ಯಕ್ರಮವಂ ॥ ಮತ್ತಂ ಪುರಾತ–

39 ನರ ಚರಿತ್ರಮನತಿವಿಚಿತ್ರಮಾಗಿ ಲಿಂಗಾರ್ಚ್ಚನಂಗೆಯ್ವುತಮಿರೆಯಿರೆ ⊚ ಸ್ವಸ್ತಿ ಶ್ರೀಮತು
ಯಾದವರಾಯನಾರಾಯಣಂ ಭು–

40 ಜಬಳಪ್ರತಾಪಚಕ್ರವರ್ತ್ತಿ ಶ್ರೀವೀರಮಹಾದೇವರಾಯ ವಿಜಯರಾಜ್ಯೋದಯದ [೩]ನೆಯ
ದುಂದುಭಿಸಂವತ್ಸರದ ವಯಿಶಾ–

41 ಖ ಸುದ್ಧ ೧೫ ಸೋಮವಾರ ಸೋಮಗ್ರಹಣದಲ್ಲಿ ⊚ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀ
ಮನ್ಮಹಾಮಂಡಳೇಶ್ವರ । ಉ–

[1] Read ಫಿ
[2] Read ಸ್ಸ

42 ಜ್ಜಯಿನೀಪುರವರಾಧೀಶ್ವರ ಪಟಕಲ್ಪವೃಕ್ಷಲಾಂಛಿತ (!) ವಿಜಯಧ್ವಜಂ । ಭುವನರಕ್ಷಣೈಕ
ದಕ್ಷದಕ್ಷಿಣಭುಜಂ ಚಂದ್ರಗು-

43 ಪ್ತಾನ್ವಯ(ಂ)ಸುಧಾರ್ಣ್ಣವಪೂರ್ಣ್ಣಚಂದ್ರಂ । ವಿಭವಾಮರೇಂದ್ರಂ ಹರಚರಣನಖಕಿರಣ
ಸಾನ್ದ್ರ ಚನ್ದ್ರಕಾಚಕೋರಂ । ಶ್ರೀ ಗು-

44 ಣಪದಪಯೋಧರ(ಂ) ಧ್ಯಾನಾ[ನಂ]ದಿತಮಯೂರಂ । ಮಾನಿನೀಮಾನಸರ್ವ್ವಸ್ವಸೂಱೆಕಾರಂ
ರಣದೊಳು ನೀಱಂ ಪಂ-

45 ಡಳಿಕಭಯಿರವಂ । ಆನಂದಿತಯುವತೀನಯನ[1] ಕಯಿರವಂ ಪಂನ್ನಿಚ್ಛರಗಂಡಂ ಸಮರಶೌಂಡಂ-
ಸರಣ(ಣಾ)ಗತವಜ್ರಪ-

46 ಂಜರಂ ಆಹವಾದಿತ್ಯಂ । ವೀರವಿಕ್ರಮಾದಿತ್ಯಂ । ಆತಂಗನನುನಯದಿಂ ಸಂಜಾತಗ್ಗೆರ್ತ[2]
ಜೋ[3]ಯ್ಯವಿಕ್ರಮಾದಿತ್ಯ ಪ್ರಿರ್ಬ್ಯಾತನ್ನಿಜಭುಜವಿಜ-

47 ದೋಃಪೇತವ್ವರ್ಗನೆರಡು ಮಂಡಳೀಕರ ಗಂಡರು ॥ ಆ ವಿಕ್ರಮಂಗ ಮೈಳಲದೇವಿಗವ್ಪದಿಸಿದ
ಕುಮಾರಕಂಠೀರವ ಮತ್ತಾ ವಿಕ್ರಮಾನುಜಾತಂ ಶ್ರೀ-

48 ಗುತ್ತಂ ನಿಜಭುಜೈಕವಿಕ್ರಮನಾದಂ ॥ ಅನ್ತಾಗುತ್ತನೃಪನ ವಿಶಾಳವಕ್ಷಸ್ಥಳದೊಳನವರತಂ ಸಿರಿ
ನಿಜಭುಜಾಸಿಧಾರೆಯೊಳು ವಿಜ-

49 ಯಶ್ರೀಯೊಲದಿಪ್ಪುದಱಿಂ ವೀರವಿತರಣತ್ಯಾಗಭೋಗಂಗೆಯ್ಯುತ್ತಂ ನಿಜರಾಜಧಾನಿ ಗುತ್ತ
ವೊಳಲ ನೆಲವೀಡಿನೊಳ್ಸುಖರಾಜ್ಯಂಗೆ-

50 ಯ್ಯುತಿರ್ದ್ದು ಶ್ರೀಶಿವದೇವರ ಕಾರುಣ್ಯಮಂ ಪಡೆದು ಶ್ರೀಸೋಮನಾಥಲಿಂಗಲಬ್ಧವರ
ಪ್ರಸಾ[ದ]ನಾಗಿರ್ದ್ದವಸರದೊಳು ಮನೋತ್ಸಾಹದಿಂ ಬರಸಿದ

51 ಶಾಸನಕ್ರಮವೆನ್ತೆಂದಡೆ । ಮುಂನ ಹಿರಿಯಜೋಯಿದೇವರ್ಸ್ಸರು ಚಿಕ್ಕಕುರ್ವ್ವತ್ತಿನಗ್ರಹಾರ
ಮಾಡುವಂ[4][ದು*] ಶ್ರೀತ್ರಿಭುವನಮಲ್ಲದೇವನ ಪೆರಮವಿಶ್ವಾಸಿ ಮಣಾಂ-

52 ಚಿನಾಯಕನ ಪ್ರೇರಣೆಯಿಂ ಆಗಾಮಿ ಯಕ್ಷೀಣ ಸಹಿತ ತಾಂಬ್ರಶಾಸನದಲ್ಲಿ ಬರೆಸಿ ಕುಳವ ಕಡಿದು
ಕಲ್ಲ ನಟ್ಟು ಸರ್ವ್ವನಮಸ್ಯಂ ಮಾಡಿ ಶಿವದೇವರ ಶಿವ—

53 ಕಾರ್ಯ್ಯಕಾರಾಧಿಸಿದ ವೃತ್ತಿ ೨ ಕಂ । ಮನೆ ೨ ತುಡಿಕೆ ೨ ಮಾಳವ ೨ ಹೆಡ[ಹು]ಗೆಯ ಹಳ್ಳದಿಂ
ಮೂಡ[ಲು] ಏಕಸ್ಥಬದಲಿ ಎರೆ ಮತ್ತರು ಎಂಟು ॥ ಮತ್ತಂ

54 ಕಾಳಯುಕ್ತಸಂವತ್ಸರದ ಕಾರ್ತ್ತಿಕ ಸುದ್ಧ ೮ ಸೋಮವಾರದಂದು ಶ್ರೀಶಿವದೇವರು
ಗೋಪೆ ಕುಱುವತ್ತಿಯ ಪ್ರತಿಗ್ರಹಸ್ಥರ ಕಯ್ಯಲು ಕ್ರಯಂಗೊಂ-

55 ಡ ಕ್ಷೇತ್ರ ಗೋಪೆಯಲ್ಲ ಆಲಕೊಳನಿಂ ಮೂಡಲು ಎರೆ(!)ಮತ್ತರು ೪ ಕ ೫೦ ಚಿಕ್ಕಕುಱುವತ್ತಿಯಲಿ
ಹಿರಿಯಕೆ[ರೆ*]ಯಿಂ ತೆಂಕ ಹೆಡಹುಗೆ ಹಳ್ಳದಿಂ

56 ಮೂಡಲು ಎರೆ ಮತ್ತರು ೩ ಕಂ ೫೦ ॥ ಗೋಪೆಯಲ್ಲಿ ಮನೆ ೨ ತುಡಿಕೆ[೩] ಇಂತಿವಯಿ[ದ]ಕ್ಕಂ
ಅ(ಅ)ಶೇಷಮಹಾಜನಂಗಳು ಅರ್ತ್ಥವ ಕೊಂಡು ಕುಳವ ಕ-

57 ಡಿದು ಕಲ ನಟ್ಟು ಸರ್ವ್ವನಮಸ್ಯಂ ಮಾಡಿ ಶಿವದೇವರಿಗೆ ಆರಾಧನೆಯ ಮಾಡಿದರು ॥ ಮತ್ತಂ ಶ್ರೀ
ಶಿವದೇವರು ಆ ಮಹಾಜನಂಗಳ ಕಯ್ಯಲು

58 ಕ್ರಯಂಗೊಂಡ ಸ್ಥಳವಿವರ ॥ ಗೋಪೆಯಲಿ ಬಂಸಿ . . ದೊಳಗೆ ಹೊಂನವತ್ತಿಗೆ ಹೋದ ನಡುವಣ
ದಾರಿಯಿಂ ತೆಂಕಲೆರೆ ಮತ್ತರು ೧ ಕಂ ೫೦ ಬಂ-

59 ಸಿಯಿಂ ತೆಂಕಲೆರೆ ಕಂಬ ೬೦ । ಅಲಿಂ ಮೂಡ ಮಕ್ಕಿ ಕಂಬ ೫೦ । ಹೊಂನವತ್ತಿಯಿಂ ಬಂದ ದೇವಿಯ
ದಾರಿಯಿಂ ಮೂಡ ಕೆಂಗಾಡು ಕಂಬ ೫೦ ಬೆಲ್ಲವತ್ತ ದೆ-

---

1 The letter ನ is written above the line.

2 Read ತ್ತ.

3 ಜೋ is written above the line.

4 The letters ದಾವಂ are written above the line in smaller characters.

60 ರೆ ಮ ೧ ದಾರಿಯಿಂ ಬಡಗಲೆಗೆ ಕಂಬ ೬೦। ಕುಱುವತಿಯಲ್ಲಿ ಕೊಂಡಗೆಯಿಯಿಂ ತೆಂಕ ವೃಥವಾ ಸ್ಥಳ
ದಲ್ಲಿ ಕಂಬ ೬೦। ಅಲಕೊಳನಿಂ ಮೂಡಲೆ–

61 ರೆ ಮ ೧ ಕಂ ೬೦ ಅನ್ತು ಮತ್ತರು ೭ ಗೋಹೆ ಮನೆ ೩ ಕುಱುವತ್ತಿಯಲ್ಲಿ ಮತ್ತರೂ ನಾಲ್ವತ್ತಱ[ಹಾ]
ಡದಲಿ ಯೆರೆ ಕಂಬ ೮೫ ಮೂಡ ಮಾನ್ಯಭೂಮಿಯಲಿ [ಮ]–

62 ತ್ತರು ೩ ಗೋಹೆಯ ಕೊಂಟ ಬಂನಿಯೆರೆ ಕಂಬ ೫೦ ಅನ್ತು ಮತ್ತರು ೩ ಕಂ [೩] ೫ ಮನೆ
ಗೋಹೆಯಲ್ಲಿ ೧ ಕುಱುವತ್ತಿಯಲಿ ಮನೆ ೨ ಅನ್ತು ಮತ್ತರು ೧೦ [ಕಂ]–

63 ಬ ೩೫ ಮನೆ ೫ ಜ ಕುಳವ ಕಡಿವದಕೆ ಶ್ರೀಗುತ್ತರ್ಸದೇವನು ಅಶೇಷಮಹಾಜನಂಗಳಿಗೆ ಅರ್ತ್ಥವ
ಕೊಟ್ಟು ಕುಳವ ಕಡಿಸಿ ಕಲ್ಲ ನಟ್ಟು ಸರ್ವ್ವನಮಸ್ಯಂ [ಮಾ]–

64 ಡಿ ಶ್ರೀಶಿವದೇವರಿಗೆ ಆರಾಧಿಸಿದನು ಮತ್ತಂ ಬೆಳುವೊಳ[ದ] ಬೊಮಗವುಡನ ಕಯ್ಯ ಕ್ರಯಂಗೊಂಡ
ಕೆಯ್ಯ ಸ್ಥಳ ಬಡಗವೊಲನಲಿ ತನ್ನ

65 ಬಳಿಯಿಂ ಪಡುವರೆರೆ ಮತ್ತರು ೪ ಬಡಗ ಮ ೪ ಅನ್ತು ಮತ್ತರೆಂಟು ಮನೆ ೧ [ಮಂ] ಎಂದೆಂದುಂ
ಸರ್ವ್ವಬಾಧೆಪರಿಹಾರಂ ಮಾಡಿ ಮಕಳು ಮಕ್ಕಳು . .

66 ದೆ ನಡೆಸುವ ದಾ . ಯಿಂ ಕುಳವ ಕಡಿದು ಕಲ್ಲ ನಟ್ಟು ಬೊ[ಂ*]ಮಗವುಡ ಶಿವದೇವರಿಗೆ
ಆರಾಧಿಸಿ . . . . . . . [ಗು]ತ್ತರ್ಸದೇವನಾರಾಧಿಸಿದನು ॥ . . . .

67 ಳಲ ಕೆಯ ಮ ೮ ಮನೆ ೧ ಕುಱುವತ್ತಿಯ ಕೆಯ ಮ ೨ ಕಂ ೭೫ ಮನೆ ೨ ಗೋಹೆಯಲ್ಲಿ ಕೆಯ ಕಂ
೫೦ . . . . . . ಶಿವದೇವರು ಬಸವ . . . . .

68 ಣ್ಯ ಮಾಡಿಕೊಟ್ಟ ವೃತ್ತಿ ॥ ಮತ್ತಂ ಸಿಂಘಣವರ್ಷ ಶುಭಕೃತ್ಸಂವತ್ಸರದ ಪುಷ್ಯ ಸು . . .
. . . . . ದೇವರ . . . .

69 ವತ್ತಿಯಶೇಷಮಹಾಜನಂಗಳು ಹೊಂಗೆ ತಿಂಗಳಿಂಗೆ ಹಾಗವೊ . . . . . . . . . . .

70 ಆ ಬಡಿಯಿಂದಾದ ಗ ೧೫ ಮಂ ಆ ಶಿವದೇವರು ಮಾಡುವ ಲಿಂಗಜಂಗಮಾ . . . . .
. . . . . . .

71 ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ। ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಟಾಯಾಂ
ಜಾಯತೇ ಕ್ರಿಮಿಃ ಮಂಗಳ ಮಹಾಶ್ರೀ

72[1] ✿ ಶ್ರೀಕನ್ನರದೇವವರ್ಷದ ಸಿಧಾರ್ತ್ಥಿಸಂವತ್ಸರದ ಚೈತ್ರ ಬಹುಳ ೧೫ ಸೋ ಸೂರ್ಯ್ಯ
ಗ್ರಹಣದ ಸಮಯದಲ್ಲಿ ಚವುಡಿಸೆಟ್ಟಿಯರ ಕರಣದ ನಾಗರ್ಸನ ತಂಮ ಭಾನುದೇವನು ಕೊಟ್ಟ
ತೋಟ . . ಗದ್ದೆಯ ಕೆಳಗೆ

73 [ಗಂ]ಗನ ಕಂಬ ೫ ಆ ಸ್ಥಳದಲಿ ಜೋಗಿಸೆಟ್ಟಿ ಕೊಟ್ಟ ತೋಟ ಕಂಬ ೫ ಮತ್ತಂ ಗುತ್ತರ್ಸ
ದೇವನು ಕೊಟ್ಟ ತೋಟ ಕಂಬ ೭ ಅವನಿವನೆಱ ಕುಳವ ಕಡಿದು ಕಲ್ಲ ನಟ್ಟು ಸರ್ವ್ವನಮಸ್ಯಂಮಾಡಿ
ಶ್ರೀ–

74 ಶಿವದೇವರಿಗೆ ಗುತ್ತರ್ಸದೇವನಾರಾಧಿಸಿದನು ॥ ಮುಂನ ತೊಂನ ಬೊಂಮಿಸೆಟ್ಟಿಯರು ಶಿವದೇವರಿಗೆ
ಆರಾಧಿಸಿದ ಗದ್ದೆ ಮ . [ಆ]ರು . . ಪಡುವಲು ತೂದೋಟ ಕ[ಂ*]ಬ ೫

75 ತೊಂನವತ್ತಿಯಲ್ಲಿ ಗೋಹೆಯ ದಾರಿಯಿಂ ಬಡಗಲು ಗಂಗನ ಕಂಬ ೫ [॥*]

On the topmost portion[2]

76 ಯೀ ಶಾಸನವಮಂ ಹೇಳ್ದು ಬ–

77 ರಸಿ ಗುತ್ತವೊಳಲ . .

78 ಣಂಗಳು

1 The letters ರದ are written above the line.

2 On the curved portion at the top.

## No. 245

CHAUDADANAPUR, RANEBENNUR TALUK, DHARWAR DISTRICT

*Slab set up in the Muktēśvara temple*

### Mahādēva–A.D. 1262

This inscription referring itself to the reign of **Mahadēvarāya** is dated in **Dundubhi, Kārtika su. Pūrṇimā, Monday**. The *Śaka* year is lost. During the reign of **Mahādēva** the year *Dundubhi* coincided with **A.D. 1262** and **Kārtika** su. Pūrṇimā fell on October 28 **Saturday**, not on Monday as cited in the record.

The record gives a description of the saint **Śivadēva** of **Muktikshētra** and **Chilāḷadēva** of **Lokki**, the disciple of *Kāraṇika* **Siddha Rēvaṇadēva**. It further seems to state that **Kannadēvi**, wife of a certain **Kallarasa**, made some charities at **Muktikshētra** in memory of her deceased husband. It also records a gift made by **Guttarasa**, son of the **Gutta** chief **Vikramāditya**. The *Mahāprabhu* (name lost) of **Ulihaḷḷi** is mentioned.

### Text

1 ⊚ ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । ತ್ರೈಲೋಕ್ಯನಗರಾರಂಭ-
2 ಮೂಲಸ್ತಂಭಾಯ ಶಂಭವೇ ॥ ಶಬ್ದಾದಯೋಪಿ ಗೃಹ್ಯಂತೇ
3 ಕ್ರಿಯಂತೇ ವಚನಾದಯಃ ಅವಿಲಂಘ್ಯಾ ಹಿ ಸರ್ವ್ವೇಷಾಮಾಜ್ಞಾ ಸಂಭೋರ್ಗ್ಗರೀಯಸೀ ॥
ಭಾಳೇಂದು--
4 ಕಳಾಭೂಷಿತಮೌಳಿ ಶ್ರೀಕಲ್ಲನಾಥನವನೀಜನಮಂ ಪಾಳಿಸುಗೆ ಸರಧಿ ಸಸಿ ತಾರಾಳಿ ಕುಭೃದ್ದಿಗ್ಗಜ-
5 ಂಗಳಿಪ್ಪಂನೆವರಂ ॥ ಸ್ವಸ್ತಿ ಸಮಸ್ತದಿವಿಜದನುಜಖಚರಬೇಚರಗಂಧರ್ವ್ವಕಿಂನರಕಿಂಪುರು-
6 ಷಸಿದ (ದ್ಧ)ಮುನೀಂದ್ರಫಣೀಂದ್ರಗಣೇಂದ್ರಪ್ರಮುಖಪ್ರಚಂಡಪ್ರಣೀತವಿವಿಧನೃತ್ತಗೀತವಾದ್ಯವಿ-
7 ದ್ಯಾವೀಣಾವೇಣುನಾದವಿನೋದ ಪ್ರ(ಂ)ಸಂನವರದಾನಿ ಮಲ್ಲಿಕಾರ್ಜ್ಜುನನಂ ॥ ಕಂದ ॥ ಸಿರಿಗಿರಿ-
8 ಯೊಳಿರ್ದ್ದು ತಂನಯ ಚರಣವೆ ಶರಣೆಂಬ ವೀರಶಿವದೇವರಿಗಾಶ್ಚರಿಯಮೆನಿಸಿಪ್ಪ
9 ಪಶ್ಚಿಮವರವಾಹಿನಿ ತುಂಗಭದ್ರೆಯುಂ ತೋಱುತ್ತಂ ॥ ಆದೇಶಿಸಿದಂ ನಡೆ ನೀನಾ ದೇಶ-
10 ಕ್ಕಲ್ಲಿ ಮುಕ್ತನಾಥನೊಳೆಂದುಮುಮಾದೇವಿಸಹಿತವಿಹನು ಸಮಾಧಾನದೊಳಱ್ಚಿಸು-
11 ವದೆನಲು ನಡೆತಂದಂ ॥ ಅನವರತಲಿಂಗಸಙ್ಗವನನುಕರಿಸಿದನನ್ಯರಾಶವಾಡದೆ
12 ಮುಕ್ತೀಶನನಪ್ರತಿಮವೆನಿ(ನೆ) ಪೂಜನೆಯಿಂದರ್ಚ್ಚಿಸು[1]ವ ಮೆಚ್ಚಿಸು[2]ವವನನವರತವು ॥ ತೊ-
13 ನೆವಂ[ನ್ತ್ರ]ಕಂಗೊಳುವನು ಯನುಮಾನಿಪನಡಿಗಡಿಗೆ ಶ್ರುತಿಗಳೊಳು ಪುಗಳಂ
14 ನೆನನೆನದು ಮಾತ್ರಿಗೊಳಿಸುವ ಘನತರ ಶಿವಲಿಂಗತತ್ವವಾ ಶಿವದೇವನು ॥
15 ಪರದೈವಮಾನಮರ್ದ್ದನನ ಪರದೈವಘರಟ್ಟದಿಟ್ಟ ಪರದೈವಕುಧ್ರುದ್ಧರವಜ್ರಹತನೆನಿ-
16 ಪಂ ಹರಗಣತೇಜಪ್ರಭಾವಧಿಂ ಶಿವದೇವನು ॥ ವಚನ ॥ ಅ(ಂ)ನಾತ್ರ ಸಿವದೇವರು ಶಿವ-
17 ಗಣಾಜ್ಞಾಸುಖದೊಳಿರುತ್ತಮಿರೆಯುರೆ ॥ ಕಾರಣಿಕರೆನಿಪರೊಳು ತಾಂ ಕಾರಣಿಕನೆ-
18 ನಿಪ ಸಿದ್ಧರೇವಣದೇವನ ಕಾರುಂಣ್ಯದ ಶಿಶು ಭಕ್ತ್ಯಾ(ಕ್ತ್ಯಾ)ಚಾರದ ಚೀಲಾಳದೇವ ಲೊಕ್ಕಿಯೊ-
19 ಳೆಸೆದಂ ॥ ಮಿಕ್ಕ ಶಿವಭಕ್ತಿ ಸುಖದಿಂದುಕ್ಕಿ ಮಹಾದೇವಭಾವಭರದಿಂ ಜಗಮುಂ ಲೆಕ್ಕಿ(ಕ್ಕಿ)-
20 ಸದೆ ಗಣಸುಖದೊಳಿಹ ಲೊಕ್ಕಿಯ ಚೀಲಾಳದೇವ ಕೋಜಗಲಿ ನಾಡೊಳು ॥ ಅನ್ತಿರುತ್ತಂಮಿ-

1 The letter ಸು is written above the line.

2 The letter ರ is written below the line.

21 ದ್ಧರ್॥ ಪೊದವಿದ ಸಿವಭಕ್ತಿಯ ಸಂಪದವಂ ಕಲ್ಲರಸನರಸಿ ಕಂ[ನಾ]ದೇವಿಗೆ ಮುದದಿಂದವಿತ್ತ ಚೀ-

22 ಲೋಳದೇವ ಜಂಗಮಸುಖೈಕಗುಣಸದ್ಭಾವಂ॥ ಆ ಸತಿ ಕಂನಾದೇವಿ ಶ್ರೀಸುಖಸಂಪದವಿಲಾ-

23 ಸವಿನೋದಾದಿಗಳಂ ದಾಸಣಸಿ ಸಿವಗಣಂಗಳಿಗೋಸರಿಸದೆ ಮಾಡಿ ಕೂಡಿ ಸುಖಸುತ್ತಿಪ್ಪ-

24 ಳು॥ ವಚನ॥ ತದನಂತರವು॥ ಕವರ್ಾ[ತಿ*]ಶಯದಿ ನಿಜಪತಿ ದವ್ಮರ್ದ್ವಜನಾ ದೇವಲೋಕ
ವನೆಯಿದಲ್

25 ಧರ್ಮ್ಮಜ್ಞೆ ದೇವಿ ಕಂಚ್ಚಲೆ ಕರ್ಮ್ಮ[ರಿ]ಯ ಪಾಯಲುಜ್ಜುಗಂಗೆಯ್ದುಂನಂ॥ಪರಮಗುರು[2] ಸಿದ್ಧ[ರೇ]-

26 ವಣ ಸಿರಿಗಿರಿಯ ನಿವಾಸನಾಜ್ಞೆಯಿಂ ಬೆಸಸಿದ[ನ]ಚ(ಜ್ಜ)ರಿಯ ಮುನಿಯ ಪೊ-

27 ಕ್ತೇಶ್ವರಲಿಂಗದೊಳ್ಲ ತುಂಗಭದ್ರೆಯ ತಡಿಯೊಳೂ॥ ಯ . . . . . . ನೆನನೆನದೆ ಸದ್ಗು-

28 ರು ತಾನೇನಂ ಕೋಳುದ ವಿಚಿತ್ರಮೆನುತ್ತುಂ ಮಾನಿನಿ ಕ[ನ್ನಾ] . . . . . ನಂದದಿ ಬಂದು .

29 ಮುಕ್ತನಾಥನ ಕಂಡರು ॥ಅನ್ತ ಮುಕ್ತಿಕ್ಷೇತ್ರದಲ್ಲಿದ್ದರ್ . . . . . . . . . . .
ಂಗಮಾಚರ್-

30 ಸತಾತ್ವರೆಯಾಗಿರೆ ಯಿರೆ॥ ಶಿವಯೋಗಿಯ . . . . . . . . . ಗೆ ವೀರಕ-

31 ಂನಾದೇವಿ ಧುವನವಱುಸಲ್ಕೆ ಕಲದೇವವರ ವ . . . . . . . . . . . ಸಿದಳು

32 ಃ ಸ್ವಸ್ತಿ ಶ್ರೀಮತು ಯಾದವರಾಯನಾ . . . . . . . . ಕ್ರ-

33 ವರ್ತ್ತಿ ಮಹದೇವರಾಯ ರಾಜ್ಯ ಪ್ರವರ್ದ್ಧಮಾ . . . . . . . . . . .

34 ಮಹಾಮಂಡಳೇಶ್ವರಂ ಪೃಜನಿಪುರವರಾಧೀ[ಶ್ವರ . . . . . . . .

35 ರಮಾತ್ತರ್ಂಡ ಕದನಪ್ರಚಂಡ ಹನ್ನಿಬ್ಬರ್ರಗಂಡ ಮ . . . . . . . .

36 [ಜ]ರಂ ವಿಕ್ರಮಾದಿತ್ಯಪುತ್ರ ವೀರವಿಕ್ರಮಾನುಜ ಗುತ್ತ . . . . . . . . .

37 ಣ್ಯಮಂ ಪಡೆದು ಲಿಂಗೋ[ತ್ಸವ] ಸಮಯದಲ್ಲಿ ಶ್ರೀಮತು . . , . . . . .

38 ಕ್ತಿಕ್ಷೇತ್ರದಲ್ಲಿ ಪ್ರತಿಷ್ಠೆಯ . . . . . . ಲ್ಲಿ ದೇವರಿಗೆ ಸರ್ವ್ವ ಶ್ರೀಕ . . . . .

39 ಂ ಮಹಾಪ್ರಭು ಉಲಿಹ[ಳ್ಳಿಯ] ಮ . ಗವುಡನಿಂ ಶಕವರುಷ . . . . . .

40 ದುಂದುಭಿಸಂವತ್ಸರದ ಕಾ[ರ್ತ್ತಿ]ಕ ಸುದ ಪವುರ್ಣ್ನವಿ ಸೋಮ . . . . . . .

41 ಪಾದಸಮಕ್ಷಮದಲ್ಲಿ ಸರ್ವ್ವನಮಸ್ಯವಾಗಿ ಉಲು . . . . . . . .

42 ತ್ತರಸದೇವ ಧಾರಾಪೂ[ರ್ವ]ಕವಾಗಿ . . . . . . . . . .

43 ಮನೆ ೧ ತುಡಿಕೆ ೧ . . . . . ಂಗಱ . . . . . . . . . . .

44 ಕೊಟ್ಟ ಯೆರೆ ಬಡ . . . . . . ನಲ್ಲಿ ಗ . . . . . . .

45 ಯಲ್ಲಿ ದೆಲ್ಲ[ವತ್ತ] . . . . . . ಕಮತ್ತ . . . . . . . . . . .

46 ಳು ಪಾಲಿಸುವ . .

## No. 246

### CHAUDADĀNPUR, RANEBENNUR TALUK, DHARWAR DISTRICT

*Stone set up in the Muktēśvara temple*

### Mahādēva – A.D. 1263

This composite record contains five grants, two of which refer themselves to the reign of **Mahādēvarāya**. The first of these is dated in **Śaka 1185, Dundubhi, Vaiśākha śu. 15, Monday, lunar eclipse.** The date is irregular. On the *tithi* cited

[1] Read ರಾ.

[2] The letter ರು is written above the line.

[3] The letter ಕ is written above the line.

there was no lunar eclipse nor was it a Monday. The *tithi* corresponds to **A.D. 1262, May 5, Friday**. It records a grant of land made by **Bomma-gavuṇḍa**, son of **Rama-gavuṇḍa** of **Bevoḷal** (apparently mistake for **Beḷuvoḷal**), under the orders of the **Gutta** chief **Guttarasa**, who was ruling at **Guttavoḷal**. His genealogy is given. The second one was made at the command of the king by **Dēvarasa**, the *Mahāpradhāna* and *Sarvādhikāri* of **Toragale**. It is dated in the following year, *viz.*, **Rudhirōdgāri Jyēshṭha ba. 5, Sunday, Shaḍaśiti-saṁkrānti**, corresponding to **A. D. 1263, May 27, Sunday** on which day the **Shaḍaśiti-saṁkrānti** occurred. The *tithi* on this day was however. *śu.* 3. The recipient of these gifts was the saint **Śivadēva** of **Muktikshētra** who is described as having taken his birth on earth at the desire of *amara-gaṇas* and whose saintly qualities are highly extolled.

The other three grants were apparently engraved on the stone later. The first which is undated was made by **Guttarasa** himself, probably sometime after the above grants were made. The second one is dated during the reign of **Siṅghaṇadēva Śubhakṛit, Pushya śu. 3, Friday**, corresponding regularly to **A. D. 1242, December 26 Friday**. It states that the *Mahājanas* of **Gōpe** and **Kuruvatti** made gifts to **Śivadēva**. The third one is dated in the **16th year of the reign of Rāmadēva, Vyaya**. The further details of the date are lost. During the reign of Rāmadēva *i.e.*, Rāmachandra the cyclic year coincided with **A. D. 1286-87**. It records a grant of land and money made to the god **Muktēśvara**.

The land measures *Gaṅgana-mattaru* and *Gaṅgana-kaṁba* are mentioned.

## Text

1 ⊚ ಓಂ ನಮಃ ಶಿವಾಯ । ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । ತ್ರೈಲೋಕ್ಯನಗರಾರಂಭ
ಮೂಲಸ್ತಂಭಾ-

2 ಯ ಶಂಭವೇ ॥ ಶಬ್ದಾದಯೋಪಿ ಗೃಹ್ಯಂತೇ ಕ್ರಿಯ[ಂ*]ತೇ ವಚನಾದಯಃ । ಅವಿಲಂಘ್ಯಾ ಹಿ
ಸರ್ವೇಷಾಮಾಜ್ಞಾ ಶಂ-

3 ಭೋರ್ಗ್ಗರೀಯಸೀ ॥ ಶ್ರೀಮುಕ್ತೇಶ್ವರನತುರ್ಪ್ಪೇಮದಿ ರಕ್ಷಿಸುಗೆ ಜಗಮುನನುಪಮಾಂಕ್ಷೀ
ಧಾ[ಮ]ನಗಣ್ಯಮಹೋ-

4 ದಯನಾಮಂ ಶ್ಯಶಿಮೌಳಿರಂಜಿತಶ್ರೀಚರಣನು । ಸ್ವಸ್ತಿ ಸಮಸ್ತಸುರಾಸುರಗಣಕಿಂನರ
ಕಿಂಪುರುಷಗ-

5 ರುಡಗಂಧರ್ವ್ವಸಿದ್ಧವಿದ್ಯಾಧರಪನ್ನಗಪ್ರಮುಖನಾಕಿನಿಕಾಯವಿನಮಿತಪ್ರೋದ್ಯದುತ್ತುಂಗ
ಮಕುಟತಟಘಟಿತ-

6 ಚಂಚತ್ಪುಟುಟುಳಮಣಿಮಾಣಿಕ್ಯಶ್ರೇಣಿಕಿರಣಾರುಣಮರೀಚಿಮಂಜರೀರಂಜಿತಶ್ರೀಪಾದಪದ್ಮ । ಸತ್ಯ
ಸಮಾಧಿ-

7 ಶಸಿತ್ರ್ಯದೋಷಪಕ್ವತಕಿ ಟ್ರಯಾಕಾಂಡಫಲಾನಪೇಕ್ಷಿತನಿರಸ್ತಾಶಿಶಯನಿಹೊ ಕ್ಷೇತ್ರವೋದಗ್ರಪ್ರತ್ಯಗ್ರೀ
ಕೃತಹರಾಮಳಚರಣ-

8 ಧ್ಯಾನಸಿದ್ಧಿರ್ವ್ವಿಷ್ಣಾಪರೋಕ್ಷಜ್ಞಾನಸಿದ್ಧಶಿವಯೋಗಾರೂಢಗೂಢನಿವಾಸನಿಜಸದ್ಮ । ಪೃಥುಳಕಟಿತಟೋ
ಪಶೋಭಿತಮ-

9 ಹಾಪದ್ಮ । ಕಪರ್ದ್ದಬಂಧಾಂತರಂಗರಂಗನರ್ತ್ತಿತಮಂದಾಕಿನೀತುಂಗತರಂಗಾಕುಳೋಜ್ವಳ ದ್ವಿಜದ
ವಿಶುದ್ಧ(ದ್ಧ)ಕೀರ್ತ್ತಿ-

10 ಕರಪಲ್ಲವೇವ ಚೂಡಾಗ್ರಖಚಿತಚಾರುಚಂದ್ರಕಳಾವತಂಸ। ಅಬೀ(ಭೀ)ಳದಾ(ಘಾ)ಳಭುಜಂಗಯುಗಳ ಕುಂಡಳಮಂಡಿತಕರ್ಣ್ಣಾ-

11 ವತಂಸ। ಮಹಾವಿಷ್ಣುಕಂಕಾ(ಕೆ)ಣಧೃತವಾಮಾಂಸ। ಅತಿಮಥನಸಂಭೂತಾ[ಭೀ]ಳ ಹಾಳಾಹಳ ಕಾಳಕೂಟಕಪಿಶನೀಲಗ್ರೀ-

12 ವ। ಅಚಿಂತ್ಯಪ್ರಭಾವ॥ ಶ್ರೀಮಹಾದೇವ। ಯೆಂದಸಂಖ್ಯಾತಾಮರಗಣಂಗಳು ಸ್ತೋತ್ರಂ ಗೆಯ್ಯುತ್ತಮಿರೆ ಶ್ರೀಕೈಳಾಸ-

13 ನಿವಾಸಿಯಿಂತೆಂದಂ॥ ಶ್ರೀ॥ ನ್ನುಗೇಂ ಕಾರಣ ಪೇಳಿಮೆಂಬೆತೆ ಗಣಂಗಳು ಬಿಂನಪಂ ದೇವ ದುಃಕೃತ ದಿಂ ಧರ್ಮ್ಮವಡಂಗಿ

14 ಪೋಯ್ತು ಕಲಿಕಾಲಂ ಪೆರ್ಚ್ಚೆ ಚಾರ್ವ್ವಾಕ ಸೌಗತ ಬೌದ್ಧಾಗಮಂ ವರ್ತ್ತಿಸುತ್ತಮಿದೆ ಲೋಕಾ ಲೋಕವಂ ಪಾಳಿಪೊರ್ಕ್ಕಿಯುಂ

15 ಮಾಳ್ಪುದೆ ಕಜ್ಜವೆಂದು ನುಡಿಯಲು ಶ್ರೀಪಾರ್ವ್ವತೀವಲ್ಲಭಂ॥ಅಕ್ಷಯನಿಧಾನ ಮುಕ್ತಿಯ ದೀಕ್ಷಾಸ್ಥಳ ತುಂಗಭದ್ರೆ ಪ-

16 ಶ್ಚಿಮಮುಖದಿನಪೆಕ್ಷಯುಮಂ ಮಾಡಲು ತದ್ದಕ್ಷಿಣತಟದಲ್ಲಿ ಮೆಱಗು ಮುಕ್ತಿಕ್ಷೇತ್ರಂ॥ ಅಲ್ಲದ್ದು ಮೂಱು ಲೋಕದ-

17 ರೆಲ್ಲರ ಪಾಪವನ ಮಾಳ್ಪನೆನುತಗಜಾತಾವಲ್ಲಭನವತರಿಸಿದ ಭೂವಲ್ಲಭೆಗನುರಾಗಮುಪ್ಪಿನಂ ಮುಕ್ತೀಶನು ॥ ಲಿಂ-

18 ಗವವತರಿಸಿತಾಹಾ ಹಿಂಗದೆ ನಾವಿಪ್ಪ(ಪ್ಪೆ)ವೆಂದಸಂಖ್ಯಾತಧರ್ಮ್ಮ(!) ರಂಗಕ್ಕೆ ಬರಲಿಕಮರಗಣಂಗಳ ಮೋಪಾಜ್ಞೆ-

19 ಯಿಂದ ಶ್ರೀಶಿವದೇವನು॥ [ಉದ]ಯಿಸಿದನಗ್ರಜನ್ಮದ ಪದದೊಳ್ತನುಗುಣವನೊಂದದೆಲ್ಲಾಗ ಮದೊಳ್ಕದನವಿರೋ-

20 ಧಿಯು ಶ್ರೌತೋದಿತದೇವನೆನುತ್ತ ತಿಳಿದು ಶ್ರೀಶಿವದೇವದೇವನು॥ ಆಶ್ರಮ ನಾಲ್ಕುಂ ತಿಳಿ ಯಲನಾಶ್ರಮವಾಶ್ರಮಮನೆ-

21 ಯ್ದಿದಶ್ರಮದಿನ್ದು। ವಾಶ್ರಮವಿನಿಹಿತವೆಂದತ್ಯಾಶ್ರಮಮಂ ಧರಿಸಿ ಮೆಱದ ಶ್ರೀಶಿವದೇವನು॥ ಲಿಂಗವನಪ್ಪಿದ ಕೋ-

22 ಳ್ಗಳನಂಗನೆಯುರನಪ್ಪನೆಳಿಪಿ ನೋಡೆಂ ಕೂಡೆಂ ಮ। ನಂಗೊಡೆನವಧಾರೆನುತವಭಂಗಬ್ರತಿ ಶಂಕರಂಗೆ ದಾಸಿಯ ಕೊಟ್ಟನು

23 ॥ ವ ॥ ಮತ್ತಮನೇಕ ದಾಸೆಯುನೀತಂಗೆ ಕೊಟ್ಟು ॥ಕಂ॥ ತಲೆದಂಡ ಸ್ವರ್ಗ್ಗಮುಕ್ತಿಯ ಫಲವನಪೇಕ್ಷಿ ಸಿದೆನಾದಡೆಲೆ ಶಂಕರಾ ಕೇಳ್ ನ-

24 ಲೆ ಪುಣ್ಯಪಾಪವೆರಡಱ ಫಲವಲ್ಲದ ನಿತ್ಯಪೂಜೆಯಂ ಮಾಡಿದಪೆಂ ॥ ಎನ್ದು ದೃಢಸಂಕಲ್ಪನಾಗಿ ॥ ಆಸೆಯು ಪಾಸ-

25 ಮಂ ಪಱಿದು ರೋಸದ ಮೀಸೆಯ ಕಿತ್ತು ಕಾಮ ದೇಡೋನಱಿಸಿಂದು ಲೋಭಮದವುಂ ಬೆದಱಿಟ್ಟು ತ ಮಾನಮೋಹತೃಷ್ಣಾಸ-

26 ಬಲಂಗಳಂ ಜಱಿದು ಬಗ್ಗಿಸಿ ಗೆಲ್ದುಱ ತೊತ್ತುಮಾಡಿದಂ ದೂಸಕಧೂಮಕೇತು ಶಿವದೇವನತರ್ಕ್ಕ್ಯ ಗುಣಪ್ರಭಾವನ ॥

27 ಮೆಟ್ಟಿದ ಕಲಿಕಿಯನೊಱೆಯುಂ ಕಟ್ಟಿದ ನೂಱೆಂಟು ದ್ಯಾಧಿಗೋಂ ನವು ಶಿವಯೆಂದಿಟ್ಟಂ ವಿಭೂತಿ ತಿಲಕವ ಕಟ್ಟಾಳ್ದ-

28 ಲದಂಕಮನದೊಳತಿನಿಃಸಂಕನು ॥ ಜಳ ಮೊದಲಾಗಿರೆ ಪತ್ತುಜ್ಜ್ವಳವೆನಿಪ ಸ್ನಾನವೆಂಟು ಪತ್ತಱೊಳಿದೆ ನಿರ್ಮ್ಮಳವೆನಿ-

29 ಪುದೆಂದು ಭಸ್ಮದಿ ತೊಳೆದಂ ಕರ್ಮ್ಮಾದಿಮಲನೀ ಶಿವದೇವನು । ಅಂಕೆಗೆ ಝುಂಕೆಗೆ ಮನದೊಳ್ಶಂಕಿಸಿದಡೆ ನಿಂನ ಭ-

30 ಕ್ತರಾಣೆಲೆ ಪಶುಪತಿ । ಶಂಕರನೊಳಾದೊಡಂ ಬೇಡೆಂ ಕೇಳ್ ಬೇಡಿದಡೆ ಯೆಂನ ತಲೆಯೆ ದಂಡವು ॥ ಅಣಕದಣ್

31 ಕಲಿಗೆ ಮುಂಕಣ್ ಸೆಣಸುವ ವಾದಿಗಳ್ಗೆ ಬಾಯಸಣ್ ಜಗವಱಿಯರೆ (।) ಗುಣ್ ಸಕಳವೇದಶಾಸ್ತ್ರದ ಕಣ್ ಶಿವತತ್ವಾನುಭಾವ-

32 ನೀ ಶಿವದೇವನು ॥ ಶಿವಸದ್ವಿದ್ಯೆ[1]ಯೆ ವಿದ್ಯೆಯೆಂದು ಶಿವಭಾವಂ[2] ಭಾವವೆಂದುವಾ ಶಿವಮಂತ್ರಂಗಳೆ ಮಂತ್ರವೆಂದು ಶಿವಮೂರ್ತ್ತಿಧ್ಯಾ-

33 ನವೆ ಧ್ಯಾನವೀ ಶಿವನಿತ್ಯೋತ್ಸವವುತ್ಸವಂ ಶಿವಕಥಾಳಾಪಂಗಳಾಳಾಪ ಮಿಕ್ಕವಸೇಬ್ಯಂಗಳೆನುತ್ತ ವೀರ ಶಿವದೇವಂ ಶಾಲ್ದ

34 ವೀರವ್ರತಂ ॥ ಶಿವನಂ ತೋಱುವ ಮಾರ್ಗ್ಗ ಮಾರ್ಗ್ಗ ಶಿವಸದಾಚಾರಂಗಳಾಚಾರವೀ ಶಿವಸಂ- ಯೋಗ[3]ವೆ ಯೋಗ ನಿತ್ಯಶಿವಪೂಜಾಕ-

35 ರ್ಮ್ಮವೆ ಕರ್ಮ್ಮವೀ ಶಿವನೇ ದೇವನು ದೇವನನ್ಯವಿಷಯಂ ಬೇಡಲ್ಲಹೊರ್ಲೆಂದು ಶ್ರೀಶಿವದೇವಪ್ರಭು ವೆತ್ತಿದಂ ಧ್ವಜಪತಾಕೋದ್ದಂ-

36 ಡಮಂ ದಂಡವಂ ॥ ಎಲಗೆ ವಾದಿಗೀದಿ ಪಡ ವೈಷ್ಣವಗೀಷ್ಣವ ಸಾರಗಿವುರ ಮಾಣಲಗಳ ಬೊಂಮಿಗಿಂಮಿ ನಿಗಮಾರ್ತ್ಥ

37 ಪನಱಿಯದ ಯಜ್ವಿಗಿಜ್ವಿ ಬೇಡಲಗಳ ಬೌದ್ಧಗಿದ್ಧ ಜಱಿಯಾಗಮಿ ಗೀಗಮಿ ಮಂತ್ರವಾದಿ ಸಾಕುಲಿ ಯದಿ-

38 ರೆಂದು ಬಗ್ಗಿಪುದು ಶ್ರೀಶಿವದೇವನ ಕಾಲಹೊಂದೊಡರು ॥ ಬೆರಳಂ ಕರ್ಚ್ಚಿ ಕರಂಗಳಂ ಮುಗಿದು ಬಾಯಂ ಪಾ-

39 ಯುವಂತಮೆರಡ್ಕರದಿಂ ಮುಚ್ಚುತ ಬಾಯಿಬಿಟ್ಟು ಕುಸಿ[ಪೊಂ]ಮೆಯ್ಯಿಕ್ಕುತಂ ಪಲ್ಲಗಳಂ ಕಿರಿದಂಬೆ ಶರಣಾರ್ತ್ಥಿ-

40 ಯೆಂದನುದಿನಂ ಷಡ್ದರ್ಶನಂ ಬಾಹುಲಿ ಭರದೊಳ್ಪೆತ್ತೆಳಲುತ್ತಮಿದ್ದುರ್ವನಿಶಂ ಶಿವದೇವ[4]ವಾಮಾಂ ಘ್ರಿಯೊ-

41 ಳು ॥ ವ ॥ [॥*] ಮತ್ತಂ ದುಟ್ಟಫರಟ್ಟಲಿಂಗಕ್ಕೆ ಕಟ್ಟಿದೊಜ ಕೊಟ್ಟಬಾಪೆ ದಿಟ್ಟವಾರಿಯ ಕಟ್ಟಾಳು ಶಿವದೇವಂ ಶ್ರೀಜ್ಯೋತಿನಾಥ-

42 ನೆ ಮುಕ್ತನಾಥನೆಂದಱಿದು । ಕಾಲಕಲ್ಮಿಯಂ ಜಱಿದು । ತನುಗುಣಂಗಳಂ ಮೆಱಿದು । ಆವರಣಂಗಳಂ ತೊ-

43 ಱಿದು । ಉಭಯಕರ್ಮ್ಮದ ಬೇರಂ ಕೊಱಿದು । ಮದನಶರಂಗಳಂ ಮುಱಿದು । ಮಾಯಾಪಾಶಮಂ ಪಱಿದೂ ।

44 ಕಂ ॥ ಮಾನಸವಾಚಿಕಕಾಯಿಕವೇನುಂಟಡ[ಗಿ]ರೆ ನಿಂ[5]ನ ಭಕ್ತರೊಳನಿಶಂ । ಸಾನಂದದಿಂದ ಮಾಳ್ಪೆಂ ನಾನನ್ಯವ ನೆನೆ-

45 ಯೆ ನುಡಿಯೆ ಮಾಡೆ ಕೂಡೆಂ ॥ ವ ॥ ಇಂತೆನುತ್ತ ದೇವರೋಕದಲ್ಲಿ ಕೊಟ್ಟ ಪ್ರತಿಜ್ಞೆಯಂ ತಿಳಿತಿಳಿದೂ ॥ ನಿಷ್ಠಿಸಿ

---

1 The letter ದ್ಯೆ is written above the line.
2 The letters ಭಾವಂ are written above the line.
3 The letter ಗ is written above the line.
4 The letter ವ is written above the line.
5 The latter ನಿಂ is written above the line.

46 ನೋಡುತ ಮುಳಿದಾನುಷ್ಠಾನಂ ಪೊಲ್ಲಪೆಂದು ಕಂಡಾ ಶಿವಪದನಿಷ್ಠೆ ನೆಲೆಗೊಳಲು ಶ್ರೀಷ್ಠಾನುಷ್ಠಾನವ
ವಮಾ–

47 ಳ್ದನನುದಿನಂ ಶಿವದೇವನು ॥ ಲಿಙ್ಗಕ್ಕೆ ಜಂಗಮಕ್ಕಂ ಹಿಂಗದೆ ದಾಸಿತ್ವಮಾಳ್ಪುದೆ ಬೆಸನೆನ್ದಾ ಸಂ–

48 ಗನಬಸವಂ ಬೆಸಸೆ ಮನಂಗೊಂಡರ್ಚ್ಚಿಸುವನುಭಯಲಿಂಗವ ಮುದದಿಂ ॥ ಮೃಡಗಣವರಪ್ರಸಾ
ದಮ ಪಡೆದಂ

49 ಜಗವರಿಯಲಂದು ಸಂಗನಬಸವಂ ॥ ಪಡೆದಾ ಪ್ರಸಾದಸಿದ್ಧಿಯ ಕಡುವೀರಬ್ರತದಿ ಪಡೆದನೀ
ಶಿವದೇವನು ॥ ವ ॥

50 ಮತ್ತಂ ಸತ್ಯಗಣಂಗಳ ನಿತ್ಯಪ್ರಸಾದಸಂಪನ್ನನಾಗಿ ಹಿಂಗದೆ ಲಿಂಪ್ಗಾರ್ಚ್ಚನೆಗೆಯ್ಯುತ್ತಮಿರೆಯಿರೆ ॥ ✿
ಸ್ವಸ್ತಿ

51 ಶ್ರೀಮತು ಯಾದವರಾಯನಾರಾಯಣಂ ಭುಜಬಳಪ್ರೌಢಪ್ರತಾಪಚಕ್ರವರ್ತ್ತಿ ಶ್ರೀವೀರಮಹಾ–

52 ದೇವರಾಯವಿಜಯರಾಜ್ಯ ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ವುದಿತೋದಿತ
ಬರುತ್ತಮಿರೆ ॥

53 ✿ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ಉಜ್ಜಯನೀಪುರವರಾ
ಧೀಶ್ವರಂ ಚಂ–

54 ದ್ರಗುಪ್ತಾನ್ವಯಂ ಗುತ್ತಕುಳಕಮಳಮಾರ್ತ್ತಂಡ ಕದನಪ್ರಚಂಡ ಹಂನಿಬ್ಬರಗಂಡ ಮಂಡಳಿಕ
ಭೈರವಂ ಶರಣಾ–

55 ಗತವಜ್ರಪಂಜರಂ ಶ್ರೀಸ್ವರ್ಣ್ನಲಿಂಗ ಗೇ(ಗ)ಳಗನಾಥದೇವರ ದಿಬ್ಯಶ್ರೀ[ಪಾದಪ*]ದ್ಮಾರಾಧಕನಪ್ಪ
ಶ್ರೀವೀರವಿಕ್ರಮಂಗಂ ಮ–

56 ಹಾದೇವಿಯರಿಗಂ ಪುಟ್ಟಿದ ವಿಕ್ರಮಾಂಕನ ಪ್ರಭಾವಮೆಂತೆಂದೊಡೆ ॥ ಧರ್ಮ್ಮದ ಪೆರ್ಮ್ಮನೆ ಸತ್ಯದ
ನಿರ್ಮ್ಮಳತೆಯ

57 ಗೊತ್ತು ಕವಿಜನಂಗಳ ಕಡವರ ॥ ಕೂರ್ಮ್ಮೆಯ ತಾಯ್ಮನೆ ಜಾಣಿನ ನಿರ್ಮ್ಮಾಣದ ರತ್ನಕಳಶ ವಿಕ್ರಮ
ಭೂಪನು ॥

58 ಆ ವಿಕ್ರಮನೃಪಂಗಂ ಮಯಿಳಲದೇವಿಯರಿಗಂ ಪುಟ್ಟಿದ ಗುತ್ತನೃಪನ ಪ್ರಭಾವಮಂ ಪೊಗಳ್ವಡೆ ॥

59 ⊞ ದಿಕ್ಕಾಂತಾಜನತಾಲರಾಟಪಟಳಪ್ರೋದ್ಭಾಸಿರತ್ನೋಜ್ವಳಾದೇಶಃ ಸಜ್ಜನಚಿತ್ತವೃತ್ತಿವಿಭವ
ಪ್ರಖ್ಯಾತಕೀರ್ತ್ತ್ಯರ್ದ್ಧ–

60 ಜಃ । ಸತ್ಯೋತ್ಸಾಹಸಃಖಾಬ್ಧಿವರ್ದ್ಧನಯಶಃ ಕಾವೇರೀದಿನೀವಲ್ಲಭಃ ಶ್ರೀಮಾನ್ನೃಪತಿವಿಕ್ರ
ಮಾಂಕತನುಜಂ(ಃ)

61 ಶ್ರೀಗುತ್ತಭೂಪಾಳಕಃ ॥ ಕಂ ॥ [।*] ಆ ವಿಕ್ರಮನ ಪರಾಕ್ರಮಮಾ ವಿಕ್ರಮನೊಲವಾ[ವು*]
ದಾರ ತನಗೊಗೆಯೆ

62 ಬುಧರ್ಗ್ಗೀವೆಡೆಯೊಳು ಶರಣೆಂದರ ಕಾವೆಡೆಯೊಳು ಭೂಮಿಪಂಗಾರ್ಸ್ಸರಿಯೇ ॥ ಮಲಪ ವಿರೋಧಿ
ವೈರಿಗ–

63 ಳ ಗಣ್ಡ ರಣಾಂಗಣದೊಡರ್ದ್ದ ಬೆಂಬಲವನೆ ಪೊರ್ದ್ದ ಪಿಂತಡಿಯನಿರ್ದ್ದರ ಗಣ್ಡನಿರ್ಚ್ಚ ಬೆಚ್ಚ
ಕಕ್ಕುಲಿತೆಯ ಮಾ–

64 ಡುವರ್ಗ್ಗಳೆದ ವೀರರ ಗಂಡನಾ ಸಾಹಸಕ್ಕೆ ಮೆಯ್ಗಲಿಯೆನಿಸಿಪ್ಪ ತೊಣ್ಡರೊಳು ಗಂಡರ ಗಂಡನು

65 ಗುತ್ತಭೂಭುಜನು ॥ ವ ॥ ಮತ್ತಂ [ದಶ]ದಿಗ್ವಳಯಂಗಳ[ಯ]ಂಗಳಂ ಪರ್ಬ್ಬಿದ ಕೀರ್ತ್ತಿ
ಕಾಂತೆಯಿಂ ವೀರ ವಿ–

1 Read ಸಾ.

2 The letter ದ is written above the line.

3 Between ಮಾ and ನೊ some letters seem to have been engraved and later on erased.

66 ತರಣಂಗಳಂ ಪೊಗಳಿಸಿಕೊಱುತ್ತ ನಿಜರಾಜಧಾನಿ ಗುತ್ತವೊಳಲೊಳ್ಸುಖರಾಜ್ಯಂ ಗೆಯ್ಯುತ್ತ ಮಿದರ್ದ್ದ

67 ॥ ಕಂ ॥ ಚಂಡಾಸಿಯ ಮಂಡಿಬ್ಬರ್ಮ್ಮಂಡಳಿಕರ ಗಂಡನೆಂಬ ಜಸವೆಸೆಯಿತು ಭೂ(।)ಮಂಡಳ ವಱಿಯಲು ಶಿವನೆ

68 ಗಂಡನೆನಿಪ್ಪೊಂದು ಕೀರ್ತ್ತಿಯಂ ಪಡೆದಿರ್ಪ್ಪನು ॥ ವ ॥ ಯಿಂತೆನುತ್ತ ತಂನೊ[ಳ್**] ಪರಿಭಾವಿಸಿ ನೋಡಿ ॥ ಕಂ ॥ ದಾರಿಣಿಯೊಳು-

69 ಗ್ರತಪದಿಂ ವೀರೇಶ್ವರನೊಲವ ಪಡೆದ ಶಿವವೇವಯ್ಯನ (।) ಕಾರುಣ್ಯವೆನಗೆ ಜೀವನ ದೇಯೆಲ್ಲೆಂದಱಿದು ತತ್ಪ್ರಸಾದ-

70 ವ ಪಡೆದನು ॥ ಅಂತು ಶಿವಗಣಪ್ರಸಾದದಿಂ ಶಿವದೇವರ ಕಾರುಣ್ಯವಂ ಪಡೆದು ಶ್ರೀಸೋಮನಾಥಲಿಂಗ-

71 ವನವಧರಿಸಿಕೊಂಬ ಸಮಯದಲ್ಲಿ ಗುತ್ತೇಶ್ವರು ಶ್ರೀಶಿವದೇವರ ಶಿವಪಾದಂಗಳಿಗೆ ಸಮಾರಾಧನೆಯ ಮಾ-

72 ಡಿದ ಶಿವಪುರಕ್ಕೆ ಬೆಪೊಳಲ ರಾಮಗವುಂಡನ ಮಗ ಬೊಂಮಗವುಂಡನಂ ಕರಸಿ ಬೆಪೊಳಲ ಬಡಗ-

73 ಣ ಹೊಲದಲ್ಲಿ ಗಂಗನಾಯಿ ಮತ್ತರು ಯೆರೆಯ ಕೆಯ್ಯನಿಕ್ಕೆಂದಡದಾ ಬೊಂಮಗವುಂಡ ಖರೊಳ್ಳಿತು ಮ-

74 ಹಾಪ್ರಸಾದ ಜೀಯಯೆಂದು । ಗ.ತ್ತೊಳಲ್ನಾಡಪ್ರಭುಗಳಂ ಮುಂದೆ ಕಯಿಕೊಂಡು ತಂನ ಸ್ಥಳದ ಹೆ-

75 ಗ್ಗಡೆ ಮುದ್ದಯ್ಯ ಮುಖ್ಯ ಸಮಸ್ತಪ್ರಜೆ ಪ್ರಕೃತಿ ಯೆಂಟುಹಿಟ್ಟು ಪಂಚಮಠ ನಖರ ಮುಂಮುರಿದಂ-

76 ಣ್ಡ ಸಹಿತ ಬಂದು । ತಂನ ಗವುಡಗೆಯಿಂ ಬಡಗಣ ಬಸವಯ್ಯನ ಕೆಯಿಂ ಮೂಡಲು । ಚ-

77 ಕ್ಕಕುಱುವತ್ತಿಯ ಹೊಲವೇರಿಯ ಸಾಲದೆಳನಿಂ ತೆಂಕಲು । ಯೆಂಸ್ಸಿಗೆಱೆ ಕಡ[ಗ]ದ ಕೊಳನಿಂ ಪ-

78 ಡುವಲು(।)ಕಲಿದೇವರ(।)ಕಂಮಾಱಿಗೆಯಿಂ ಬಡಗ ತೆಂಕಸ್ಥಳದಲ ಯಿಕ್ಕಿದ ಯೆರೆಯ ಭೂಮಿ ಗಂಗನ

79 ಮತ್ತರಾಯಿ ॥ ಆ ಭೂಮಿಯ ಫಲ ಬೆಪೊಳಲ ಕಾರಣವಿಲ್ಲ ॥ ಶಕವರ್ಷ ೧೧೮೨ನೆಯ ದುನ್ದು-

80 ಭಿಸಂವತ್ಸರದ ವಯಿಶಾಖ ಶುದ್ಧ ೧೫ ಸೋಮವಾರ ಸೋಮಗ್ರಹಣದಂದು ಶ್ರೀಮದಮರ ಗಣಂ-

81 ಗಳ ನಿಜಸಿಂಹಾಸನವಪ್ಪ ಮುಕ್ತಿಕ್ಷೇತ್ರಭೂಕಯಿಳಾಸವೆಂದು । ಶ್ರೀಶಿವದೇವರು ಜಗದ್ಧಿತಾ-

82 ರ್ತ್ಥವಾಗಿ ರಚಿಸಿದ (।) ಶಿವದೇವಪುರಕ್ಕೆ ವರ್ಷಂಪ್ರತಿ ಬರುತ್ತಬಹುದು । ಅದು ಸರ್ವ್ವಮಾನ್ಯ । ಶ್ರೀಮಾನ್ಯ ।

83 ಜಯ ಮಾನ್ಯ । ವಿಜಯ ಮಾನ್ಯ ॥ ಅತ್ತಂ ಸ್ವಸ್ತಿ ಸಮಧಿಗತಪಂಚಮಹಾಶಬ್ದ ದ್ವಾರಾವತೀಪುರವ ರಾ-

84 ಧೀಶ್ವರ ಸುವರ್ಣ್ಣಗರುಡಧ್ವಜಂ ವೃಷ್ಣಿವಂಶೋದ್ಭವಂ ಯಾದವಕುಳಕಮಳಕಳಿಕಾವಿಕಾಸಭಾಸ್ಕರಂ ಅರಿರಾ-

85 ಯಜಗರ್ಝಂಪ ಮಾಳವರಾಯಮದನತ್ರಿನೇತ್ರಂ ಗೂರ್ಜ್ಜರಭಯಜ್ವರಂ ಚೋಳರಾಯದೆಸಾ (ದಿಶಾ) ಪಟ್ಟಕೆಲಂ-

86 ಗರಾಯಸ್ಥಾಪನಾಚಾರ್ಯ್ಯ ಇತ್ಯಾದಿ ರಾಜಾವಳೀಸಮಾಳಂಕೃತ ಶ್ರೀಮತ್ಪ್ರೌಢಪ್ರತಾಪಚಕ್ರವರ್ತ್ತಿ ಶ್ರೀ-

87 ಮಹದೇವರಾ ವಿಜಯರಾಜ್ಯ ಪ್ರವರ್ದ್ಧಮಾನಮಾಚಂದ್ರಾರ್ಕ್ಕಂ ಬರುತ್ತಮಿರೆ ॥ ಕಂದ ॥ ದಕ್ಷಿಣದಿಕುತಟ-

88 ವಿಳಸಿತಲಕ್ಷುಮಿಗೆ ನೀನಧಿಪನೆಂದು ಯಾದವಭೂಪ ನಿರೀಕ್ಷಿಸಿ ಬೆಸಸಲು ಮುದದಿಂ ರಕ್ಷಿಪ ಹೊಜಗಲೆಯ

89 ದೇವರಸ ಜಾಪದವ[ಮ್] ॥ವ॥ ಶ್ರೀಶಿವದೇವರು ಮಾಡುವ ಲಿಂಗಜಂಗಮಸಮಾರಾಧನೆಗೆ ಸರ್ವ್ವಭಾವದಿಂ ಶುಶ್ರೂ-

90 ಷೆಯ ಮಾಪ್ಪುದೆಂದು ಶ್ರೀಮಹದೇವರಾಯ ನಿರೂಹಂಗೊಡೆ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾ-

91 ಪ್ರಧಾನಂ ಸರ್ವ್ವಾಧಿಕಾರಿ ತೊಱಗಲೆಯ ದೇವರಸರು ಶ್ರೀಮದ್ದಕ್ಷಿಣವಾರಣಾಸಿಯೆನಿಪ [ಪ*]
ಶ್ಚಿಮವಾಹಿನಿ ತುಂ-
92 ಗಭದ್ರೆಯ ದಕ್ಷಿಣತೀರದೊಳೆಸೆವ ಮುಕ್ತಿಕ್ಷೇತ್ರನಿವಾಸರಪ್ಪ ಶ್ರೀಶಿವದೇವರ ಲಿಂಗದರ್ಶನಾರ್ತ್ಥಂ
ಬಂದು ॥ ರು-
93 ಧಿರೋದಾ(ದ್ಗಾ)ರಿಸಂವತ್ಸರದ ಜ್ಯೇಷ್ಠ ಬಹುಳ ೫ ಆದಿವಾರ ಷಡಶೀತಿಮುಖಸಂಕ್ರಾನ್ತಿ
ತಾತ್ಕಾಲದಲ್ಲಿ ಬೆ-
94 ಱುವೊಳಲ ಬಡಗಣ ಹೊಲನಲ್ಲಿ ಮುಂನ ಕಲ್ಲು ನಟ್ಟಿದ್ದ ಗಂಗನ ಯೆಂಟು ಮತ್ತರು ಭೂಮಿಯನು
95 ಸರ್ವ್ವನಮಸ್ಯವಾಗಿ ಸಮಾರಾಧನೆಯ ಮಾಡಿದನು ॥ ಮಂಗಳ ಮಹಾಶ್ರೀ ಶ್ರೀ ಶಿವಮಸ್ತು ॥
96 ◎ ಮತ್ತಂ **ಗುತ್ತರಸನು** [ಅ] ಬೆಳುವೊಳಲ ಪಡುವ ಪೊಲನಲ್ಲಿ ಹೊಂನವತ್ತಿಗೆ ಕೋದ ದಾ-
97 ರಿಯ ಬಡಗಣ ಯೆರೆಯ ಕೆಯ ಗಂಗನ ಕಂಬ ೫೦ ಮಂ ಪೊಡೆಯರ ಪಾದಕ್ಕೆ
98 ಆರಾಧಿಸಿದನು । ಆ ಕೆಯ್ಯನು ವೊಡೆಯರು[1] ಬಸವಯ್ಯಂಗೆ ಸಾರ್ವ್ವನಮಸ್ಯವಾಗಿ ಕೊಟ್ಟ-
99 ರು ॥ ◎ ಶ್ರೀಮತು ಸಿಂಘಣವತ್ರ(ರ್ಷ) ಶುಭಕೃತ್ಸಂವತ್ಸರದ ಪುಷ್ಯ ಸುದ್ಧ ೩ ಸುಕ್ರವಾರ-
100 ದ . . . ಸಿವದೇವರ ಕ[ಯ್ಯ]ಲು ಗೋಷ್ಠಿ ಕುಱುವತ್ತಿಯ ಯಾತ್ರೆಯ ಮಹಾಜನಂಗಳು
ಹೊಂಗೆ ಶಿಂಗಳಿಂ-
101 . . . . . . . . . ಶ್ರೀರಾಮದೇವರಾಯ ವಿಜಯರಾಜ್ಯೋದಯದ ೧೬ನೆ-
102 ಯ ವ್ಯಯಸಂವತ್ಸರದ . . . . [ಯಂತರ] ಯಾ ಮಹಾಜನಂಗಳು ಯಾ ಧರ್ಮ್ಮವ
ನಡಸಿಯಲ್ಲಿಂ-
103 ದಂ ಮೇಲೆ . . . . . . . . . ಗಣಂಗಳ ಸಮಕ್ಷದಲ್ಲಿ ಯಾ ಮುಕ್ತೇಶ್ವರದೇವರು
ಸಿದ್ಧಾ[ಯ]-
104 ವ ಕೆಱುವ ಯಾಱು ಮತ್ತರು ಕೆಯಿ . . . . . . . . . . . . [ಯ್ಯಾ]ವತ್ತು
ಹೊಂನಿಂಗೆವು ಬಡ್ಡಿಗೆವು ನೆಲವಾಗಿ ಯಾ ಭೂ-
105 ಮಿಯನು ಕುಳವ ಕಡಿದು ಯಾ ಮಹಾಜನಂಗಳ ಮುಕ್ತೇಶ್ವರದೇ . . . . ಸರ್ವ್ವ
ಮಾನ್ಯವಾಗಿ ಕೊಟ್ಟರು ॥ ಯೀ ಧರ್ಮ್ಮಕೆ
106 ಯಾರು ಯಹುವಲ್ಲಿಂ . . . . ಸಾಸಿರಕೆ ಹೊಱಗು ಹದಿನೆಂಟು ಸಮಯಕೆ ದ್ರೋಹಿಗಳು ॥
107 ಸ್ವದತ್ತಂ . . . . . . . . . . ಸಕಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ॥

## No. 247

CHAUḌADĀNPUR, RANEBENNUR TALUK, DHARWAR DISTRICT

*Back of a slab setup in Muktēśvara temple*

### Mahādeva—A. D. 1265

This inscription is dated in **Śaka 1187**, **Raktākshi Pushya ba. 15**, **Sunday**, **Śravaṇa-nakshatra**, **ardhōdaya**, corresponding to **A. D. 1265**, **January 18**, **Sunday** on which day there was a lunar eclipse.

It registers a grant of land and house sites to **Śivadēva** by *Mahāpradhāna Sarvādhikāri* **Dēvarasa** of **Toragale**, under orders from king **Mahadēvarāya**. The gift land was obtained from **Maiḷadēvi** the mother of the Gatti chiefs **Guttarasa**,

1 ರು is written above the line.

**Hiriyadeva** and **Jöyideva.** Sivadēva is here referred to as *Guttānvaya-Rājaguru. Gaṅgana-mattaru* is mentioned.

## Text

1 ಓಂ ನಮ[ಃ*] ಶಿವಾಯ ॥ ೦ ಮುದದಿಂ ಪಾ-
2 ಲಿಸುಗುರ್ವ್ವಿಪದಮಂ ಚಂದ್ರಾರ್ಕ್ಕತಾರಕಂ
3 ಬರ[ಂ] ಗಿರಿಜಾವದನಾಂಬುಜಾತಮಿತ್ರಂ ತ್ರಿದಶೇಶ್ವರ ಮು-
4 ಕ್ತಿನಾಥ ದೇವರ ದೇವನು ॥ ಸ್ವಸ್ತಿ ಶ್ರೀಮತು ಯಾದವ-
5 ರಾಯನಾರಾಯಣಂ ಪ್ರೌಢಪ್ರತಾಪಚಕ್ರವರ್ತ್ತಿ ಶ್ರೀ-
6 ವೀರಮಹದೇವರಾಯನ ಬೆಸದಿಂ ॥ ಸ್ವಸ್ತಿ ಶ್ರೀಮನು-
7 ಮಹಾಪ್ರಧಾನಂ ಸರ್ವ್ವಾಧಿಕಾರಿ ತೊರಗಲೆಯ ದೇವರ್ಸ್ಸ-
8 ರು ಕಟಕದಿಂ ಬಂದು ॥ ಸ್ವಸ್ತಿ ಶ್ರೀಮದಾರೂಢವೀರವ್ರತಿ ಶಿವ-
9 ಯೋಗಸಿದ್ಧ ಶಿವದೇವರಿಗೆ ಸಾಷ್ಟಾಂಗಪ್ರಣಾಮಪೂರ್ವ್ವಕಂ
10 ಬಿಂನಪಂಗೆಯಿದನಿಂತೆಂದೂ ॥ ವೊಂದು ಗ್ರಾಮವ ಕೊಡು ನೀನೆನ್ನಂ
11 ಯದುಕುಲನೃಪೋತ್ತಮಂ ಮಹದೇವಂ । ಯಿಂದದ ಪಡಿಕರಿಸಲು-
12 ಬೇಕೆನ್ನೊಡೆ ಶಿವಯೋಗಸಿದ್ಧ ನಗುತಿಂತೆನ್ನನು ॥ ತ್ರಿಭುವನವೆಂಬು-
13 ದು ಪಟ್ಟಿಯ ಪ್ರಭುತ್ವವೇಂ ಶ್ಲಾಘ್ಯವೆ ಯದಲ್ಲದು ಮಾಣಿನ್ನಭಯಕ-
14 ರ ಸಿದ್ಧನೆನಲೂ ಶುಭಲಕ್ಷಣ ದೇವರಾಜ ಮರಳಿಂತೆಂದಂ ॥ವೃ॥ ದೇವರು ಕೊ-
15 ಟ್ಟಡೊಲ್ಲದಿರಲಪ್ಪುದು ದೇವಣ್ ಮಾಡಿ ಸಿದ್ಧಿಯಿಂ ಶ್ರೀಪಥವಂಗಳಿಂ ಮನು-
16 ಜಲೋಕದಧೀಶ್ವರರಿತ್ತಡೊಲ್ಲದಂತೆವಿರಲಪ್ಪುದುತ್ತಮಪದಾರ್ತ್ಥಚಯಂಗ-
17 ಳನಲ್ಲದಾತ್ಮಜಭಾವಕರಾತ್ತ್ರಿ(ರಿ)ತ್ರುಡದನೊಲ್ಲೆನೆಸಿಪ್ಪುದು ಧರ್ಮ್ಮವಪ್ಪುದೆ ॥ಎಂ-
18 ದಮೃತೋದರಪ್ರಭವ ದೇವನೃಪಂ ನುಡಿದೊಂದು ವಾಕ್ಯದೊಳು ಬಂದಖಿಳಾರ್ತ್ಥವಾರ್ತ್ಥ
19 ನೆಲಸಿರ್ದ್ದುದು ಶಾಸ್ತ್ರದ ಸರ್ವ್ವಸಂಪದಂ ಸಂದುದು ವೈದಿಕಾರ್ತ್ಥ ವೊಡಸಿರ್ದ್ದುದು ಧ-
20 ರ್ಮ್ಮದ ಪರ್ವ್ವವೆತ್ತು[ದೇ]ನಂನ್ದಪೆನೆಂದು ತಂನೊಳನುಮಾನಿಸುತಂ ಶಿವದೇವರೆಂ-
21 ದಪರು ॥ ಆರಾಧಿಸುವಂ ನೀನೊಲಿದಾರಾಧಿಸಿಕೊಂಬನೀಶ್ವರನುವೇನಾನುವುನಾರಾಧಿಸು
22 ಕಯಿಕೊಂಬುಂ ವೀರೇಶ್ವರನೆನ್ನ ಸಿದ್ಧ ನೇಮಿಸಲೊಲಿವಂ ॥ ಆ ದೇವರಾಜಂ ॥ ಉತ್ತರ ದಕ್ಷಿಣ
ಪಶ್ಚಿಮ-
23 ದುತ್ತುಂಗಾಸನದ ರಾಯರಾರಾಧಿಸೆ ಪವಿತ್ರ ಶಿವದೇವರಂ ಶ್ರೀಗುತ್ತಾನ್ವಯರಾಜ-
24 ಗುರುವನಾರಾಧಿಸಿದಂ ॥ ಅದೆಂತೆಂದಡೆ ॥ ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ
25 ಉಜ್ಜಯನೀಪುರವರಾಧೀಶ್ವರಂ ಚಂದ್ರಗುಪ್ತಾನ್ವಯಂ ಗುತ್ತಕುಳಕಮಳಮಾರ್ತ್ತಂಡ ಕದನ-
26 ಪ್ರಚಂಡ ಪನ್ನಿಬ್ಬರ ಗಂಡ ಮಂಡಳಿಕಭಯಿರವ ಶರಣಾಗತವಜ್ರಪಂಜರಂ ಶ್ರೀಪ್ಸ(ಸ್ಪ)ರ್ಶಲಿಂ-
27 ಗ ಗಳಗನಾಥದೇವಶ್ರೀಪಾದಪದ್ಮಾರಾಧಕರಪ್ಪ ಗುತ್ತರ್ಸ್ಸದೇವ । ಹಿರಿಯದೇವ । ಜೋಯಿ-
28 ದೇವಂಗಳೂ । ಅವರ ತಾಯ್ವೆರಪ್ಪ ಮೈಳಾದೇವಿಯರ ಕಯ್ಯಲು ಧಾರೆಯ ಕೊಂಡು ಗುತ್ತೊಳಲಾ
29 ದ ಪ್ರಭುಗಾವುಂಡುಗಳನೊಡಂಬಡಿಸಿ । ಶಕ[ವರ್ಷ] ೧೧೮೭ ರಕ್ತಾಕ್ಷಿಸಂವತ್ಸರದ ಪುಷ್ಯ
ಬ ೧೫
30 ಆದಿವಾರ ಶ್ರವಣನಕ್ಷತ್ರ ವ್ಯತೀಪಾತಂಗೂಡಿದರ್ದ್ಧೋದಯ ಪುಣ್ಯತಿಥಿಯಲ್ಲಿ ದೇವರ್ಸ್ಸರು
31 ಮಾಡಿದಾರಾಧನೆಯ ಕ್ರಮವೆಂತೆಂ[ದ*]ಡೆ ॥ ಗುತ್ತೊಳಲ ಬಡಗವೊಲದಲ್ಲ ಯೆರೆ ಗ-
32 ಂಗನ ಮತ್ತರು ೧ । ಹಿರಿಯ ಕೆಱೆಯ ಕೆಳಗೆ ಗದ್ದೆ ಗಂಡನ ಕಂಬ ೧೦। ಮನೆ ೧ ।ತು-
33 ಡಿಕೆ ೧। ತೊಂಸವತ್ತಿಯ ಮೂಡವೊಲದಲ್ಲ ಯೆರೆ ಗಂಗನ ಮತ್ತರು ೧। ಮನೆ ೧।

34 ತುಡಿಕೆ ೧॥ ಯೊಲೂರ ಕೆಱೆಯಿಂ ಬಡಗಲೆರೆ ಗಂಗನ ಮತ್ತರು ೧। ಮನೆ ೧। ತು–
35 ಡಿಕೆ ೧। ಉಲಿಹಳ್ಳಿಯಲ್ಲಿ ವೂರ ಮೂಡ[ದ*]ಸೆಯಲ್ಲಿ ಕಂಬ ೫೦ ತೆಂಕ[ದ*]ಸೆಯಲ್ಲು ಕಂಬ ೫೦
36 ಅಂತಲ್ಲ ಯೆರೆಗಂಗನ ಮತ್ತರು ೧ ಮನೆ ೧ ತುಡಿಕೆ ೧॥ ಹಾಹನೂರ ಪಡುವವೊ–
37 ಲನಲ್ಲಿ ಯೆರೆ ಗಂಗನ ಮತ್ತರು ೧ ಮನೆ ೧ ನೆಗೆಯೂರ[1]ವೊಲ–
38 ನಲ್ಲಿ ಯೆರೆಗಂಗನ ಮತ್ತರು ೧ ಮನೆ ೧ ತುಡಿಕೆ ೧॥ ಎಲದುತ್ತೂರ ಮೂಡಣ ಹೊಲ–
39 ನಲ್ಲಿ ಎರೆ ಗಂಗನ ಮತ್ತ ೧ ಮನೆ ೧ ತುಡಿಕೆ ೧॥ ಕಂನವಳ್ಳಿಯ ಬಡಗ ಹೊಲನಲ್ಲಿ ಯೆ–
40 ರೆ ಗಂಗನ ಮತ್ತರು ೧ ಮನೆ ೧ ತುಡಿಕೆ ೧॥ ಅಗಡಿಯ ಬಡಗ ಹೊಲದಲ್ಲಿ ಯೆರೆ ಗಂಗನ–
41 ಮತ್ತ ೧ ತುಡಿಕೆ ೧ ಮನೆ॥ ಹಾದರಿಗೇರಿಯ[2]ವೊಲನಲ್ಲಿ ಯೆರೆ ಗಂಗನ
42 ಮತ್ತರು ೧ ಮನೆ ೧ ತುಡಿಕೆ ೧॥ ಇಂತೀ ಹತ್ತು ಗ್ರಾಮಂಗಲಲ್ಲಿ ದೇವರ್ಗ್ಗರು ಶ್ರೀ ಶಿ–
43 ವದೇವರಿಗೆ ಸಮಾರಾಧನೆಯ ಮಾಡಿದ ಧರ್ಮ್ಮವ ಆಚಂದ್ರಾರ್ಕ್ಕವಯ್ಯಂತಂ
44 ಸರ್ವ್ವನಮಸ್ಯವಾಗಿ ಗುತ್ತೊಳಲ್ಲಾಡ ಪ್ರಭುಗಾವುಂಡುಗಳು ನಲಿಸುವರು ।

## No. 248

(*B. K. No. 172 of 1932–33*)

SAṄGŪR, HAVERI TALUK, DHARWAR DISTRICT

*Nandi-pillar set upnear the temple of Vīrabhadra*

**Mahādēva—A.D. 1265**

This inscription referring itself to the reign of **Mahādēva**, is dated in **Śaka 1186 Raktākshi, Pushya**, *Ardhōdaya-tithi*, corresponding to **A.D. 1265, January 18, Sunday.**

It records the grant of the village **Chaṁgūr**, made by **Dēvarāja**, the *Mahāradhāna* of the king, for the worship and offerings of god **Kapilasiddha-Mallikārjuna** of **Sonnalige** (modern Sholapur). Dēvarāja is stated to be governing the southern region (*Dakshiṇāṁ bhuvaṁ*).

The record begins with a *vachana* in Kannaḍa and the grant portion which is followed by another *vachana*, is in Sanskrit.

(Published in *Ep. Ind.*, Vol. XXIII, p. 189).

## No. 249

(*B.K. No. 84 of 1932–33*)

HĀVĒRI, HAVERI TALUK, DHARWAR DISTRICT

*North-east pillar in the navaraṅga in the temple of Siddhēśvar*

**Mahādēva—A.D. 1265**

This inscription referring itself to the reign of **Mahadēva is** dated in **Śaka 1187, Krōdhana, Jyēshṭha ba. 1, Sunday**, corresponding to **A.D. 1265, June 3l, Sunday,** **f. d. t.** .52.

[1] There is space for three letters in between ರ and ವೊ.

[2] There is space for three letters in between ಯ and ವೊ.

It states that **Baicharasa**, son of *Suṁkādhikāri* **Kallarasa** of **Vijayapura** made a grant of toll-incomes of the *sthaḷas* of god **Siddhanāthadēva** of the *agrahāra* of **Hāvēri** for burning perpetual lamps to the god. The grant was made at the instance of *Samastadēśādhipati* **Dēhārada Mādarasa** who was the agent of *Mahāpradhāna* **Dēvarasa** of **Toṟagale**, a subordinate of the king.

**Text**

1 ◎ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರೌಢಪ್ರತಾಪಚಕ್ರ-
2 ವರ್ತ್ತಿ ಶ್ರೀಮಹದೇವರಾಯರಾಜ್ಯೋದಯೋ ತತ್ಪಾದಪದ್ಮೋ—
3 ಪಜೀವಿ ಶ್ರೀಮನುಮಹಾಪ್ರಧಾನಂ ಸರ್ವ್ವಾಧಿಕಾರಿ ತೊಱಗಲೆಯ[ದೇ]ವರ್ಸ-
4 ರ ರಾಜ್ಯಧುರಧಾರನಿಸ್ತಾರಕಂ ಸಮಸ್ತದೇಶಾಧಿಪತಿ ದೇಹಾರದ ಮಾದರಸರ
5 ನಿರೂಪದಿಂ ಶ್ರೀಮತು ಸುಂಕಾಧಿಕಾರಿ ವಿಜಯಾಪುರದ ಸ್ಥಳಪ್ರ-
6 ತ್ರಿಯ ಕಲ್ಲರಸರ ಮಗ ಬೈಚರಸರು ಸ್ವಸ್ತಿ ಶಕವರುಷಂ ೧೧೮೭ ನೆ-
7 ಯ ಕ್ರೋಧನಸಂವತ್ಸರದ ಜ್ಯೇಷ್ಠ ಬ ೧ ಆದಿತ್ಯವಾರದಂದು ಶ್ರೀ—
8 ಮದನಾದಿಯ ಪಿರಿಯಗ್ರಹಾರಂ ಹಾವೇರಿ ಶ್ರೀಸ್ವಯ[ಂಭು]
9 ಸಿದ್ಧನಾಥದೇವರ ಸ್ಥಳಂಗಳು ಸುಂಕಕ್ಕೆ ಪ್ರತಿವರುಷವು ಪಿಂ[ಡ]ಳಿಗೆ—
10 ಯಾಗಿ ತಿಱುವರ್ತ್ತನನು ಯಾ ಸಿದ್ಧನಾಥದೇವರಿಗೆ ಯಖಂಡದೀಪ್ತಿಗ-
11 ಳ ನಡಸುವಂತಾಗಿ ಧಾರಾಪೂರ್ವ್ವಕಂ ಆಚಂದ್ರಾರ್ಕ್ಕಸ್ಥಾಯಿ-
12 ಯಾಗಿ ಕೊಟ್ಟರು ಯೀ ಧರ್ಮ್ಮವಂ ಅರಸುಗಳೂ ಮಹಾಜನಂಗಳೂ
13 ಪ್ರತಿಪಾಳಿಸುವರು ಮಂಗಳ ಮಹಾಶ್ರೀ ಶ್ರೀ|| ಸ್ವದತ್ತಂ ಪರದ-
14 ತ್ತಂ ವಾ ಯೋ ದಮ್ಮ್ಮಂ ಹರತೇ ನರಃ ಷಷ್ಟಿವರ್ಷಸಹಸ್ರಾಣಿ ವಿಷ್ಟಾಯಾ[ಂ]
15 ಜಾಯತೇ ಕ್ರಿಮಿಃ ||◎

## No. 250

(*B. K. No. 69 of 1932-33*)

HATTIMATTŪR, HAVERI TALUK, DHARWAR DISTRICT

*Stone leaning against the front wall of the temple of Pallēda Basappa*

**Mahādēva—A. D. 1266**

This inscription is dated in the **5th year** of the reign of **Mahadēva**, **Krōdhana Kārtika ba. 13, Wednesday**. The details do not work out correctly for the year *Krōdhana*. But in the next year *i.e.*, *Kshaya*, the details regularly correspond to **A. D. 1266, October 27, Wednesday**. This is probably the intended date.

It states that **Mādave**, wife of **Sēleyara Jakkaya**, died by the rite of *samādhi*.

**Text**

1 ಶ್ರೀಮತ್ ಮಹದೇವವರ್ಷದ ೫ನೆಯ
2 ಕ್ರೋಧನಸಂವತ್ಸರದ ಕಾರ್ತ್ತಿ[ಕ*] ಬ ೧೩
3 ಬುಧವಾರದಂದು ಸೇ[ಲೆ]ಯ-
4 ರ ಜಕ್ಕಯನ ಹೆಂಡತಿ ಮಾದವೆ ಸಮ(ಮಾ)ಧಿ-
5 ಯಿ ಮುಡಿಪಿ ಸ್ವರ್ಗ್ಗಸ್ಥಯಾದಳು ||

## No. 251

*(B K. No. 68 of 1932–33)*

HATTIMATTŪR, HAVERI TALUK, DHARWAR DISTRICT

*Stone near the chāvaḍi*

**Mahādeva—A. D. 1268–69**

This fragmentary inscription is dated in the **9th year** of the reign of **Mahādeva**. Further details of the date are lost. The 9th year of the reign of Mahādeva would be **A.D. 1268–69**.

It records the death of a Jaina (*āchārya?*) of the *basadi* of **[Hatti]-yamattura** by the rite of *samādhi*.

1 . . . . ಯಾದವನಾರಾಯಣ ಭುಜಬ . . . .
2 . . . . ವರ್ತ್ತಿ ಮಹಾದೇವವರುಷ ೯ನೆಯ . . . .
3 . . . . ವಾರದಂದು ಶ್ರೀ[ಣಂ]ದಿಭಟ್ಟಾರಕದೇ . . . .
4 . . . . ಯಮ[ತ್ತೂ]ರ ಬಸದಿಯಾ ಬಾದಿ . . . .
5 . . . . ಸಮಾಧಿವಿಧಿಯಿಂ ಮುಡಿಪಿ ತಾ . . . . . . . .
6 . . . . ರ್ಗ್ಗಪ್ರಾಪ್ತರಾದರು ಮಂಗಳ ಮಹಾ . . . . .

## No. 252

*(B. K. No. 168 of 1932-33)*

SAṄGŪR, HAVERI TALUK, DHARWAR DISTRICT

*Hero-stone lying in Bastimaṭṭi*

**Mahādeva—A.D. 1268–69**

This broken inscription is dated in the **9th year** of the reign of **Mahadēva**, **Vibhava**, . . . . **su. Friday**. The month is lost and the *tithi* is not given. The cyclic year *Vibhava* coincided with **A.D. 1268–69**.

It records the death by some *Jaina* rite, of **Sāvanta Sōva**, the *nālprabhu* of **Changūr**. **He** was the lay-disciple of **Nayakirti-Bhaṭṭāraka** who was the disciple of **Nandi-Bhaṭṭāraka** of **Chitrakūṭ-anvaya**.

### Text

1 ಸ್ವಸ್ತಿ ಶ್ರೀಮತು ಯಾದವನಾರಾಯಣ ಭುಜಬಳಪ್ರತಾಪಚಕ್ರ . . . . . . . . . . .
2 . . . . . . . . ಮಹದೇವರಾಜ್ಯಾಭ್ಯುದಯದ ೯ತ್ತನೆಯ ವಿಭವಸಂವತ್ಸರದೊಳು
. . . . .
3 . . . . ಂನ್ವಯಕೊರಗೆರೆನಿಸಿರ್ದ್ದ ಚಿತ್ರಕೂಟಾಂನ್ವಯ ನಿಸ್ಸಾಂಕರೆಂಬ . . . .
4 . . . . ಗೆ ಚಂದ್ರಭಟ್ಟಾರಕರಂ ‖ ಅಂತವರ ಶಿಷ್ಯರುಮಪ್ಪ ಶ್ರೀಮನುಮ . . .
. .

5 . . . . ನಂದಿಭಟ್ಟಾರಕದೇವರ ಶಿಷ್ಯರುಮಪ್ಪ ನಯಕೀರ್ತ್ತಿಭಟ್ಟಾರಕದೇವ[ರೂ]
. . . .

6 . . . . . ಯಕೀರ್ತ್ತಿಮುನೀಂದ್ರಂ ನಿರುಪಮ ಸಂಗ . . . . . . .

7 . . . . . ಶ್ರೀನಂದಿಮುನಿಪನಗ್ರತನೂಜ . . . . . . .

8 . . . . . . ಂಪಾನಿರ ದಿವಕ್ಕೆ ಸಂದಂ ಭೂನುತ [ನಾ]ವಂತಪೋವನೂರ್ಜ್ಜಿತ
ತೇಜಂ . . . .

9 . . . . . [ಸು]ದ್ಧಂ ಸುಕ್ರವಾರದ ಮೂಜಿನೆಯ ಜಾವದಲು ಶ್ರೀನಯಕೀರ್ತ್ತಿ
ಭಟ್ಟಾರಕ- . . . .

10 . . . . ರಾಧಾ(ಧ)ಕನುಮಪ್ಪ ಶ್ರೀಮಂನಾಳ್ಪ್ರಭು ಚಂಗೂರ ಗಂಗರ ಸಾಮಂತಸೋವ
. . . . .

11 . . . . ಮುಡಿಪಿ ಸ್ವರ್ಗಸ್ಥನಾದನು ಮಂಗಳ ಮಹಾಶ್ರೀ ಶ್ರೀ

## No. 253

*(B. K. No. 86 of 1932–33)*

HĀVĒRI, HAVERI TALUK, DHARWAR DISTRICT

*South-east pillar in the navaranga of the temple of Siddhēśvara*

**Mahādēva – A. D. 1269**

This inscription belonging to the reign of **Mahadēva** is dated in **Śaka 1191**, **Śukla Kārtika śu. 1**, **Monday**, corresponding, but for the week-day, to **A. D. 1269, October 27.** The week-day was **Sunday.**

It records the grant of the income derived from certain tolls to the god **Svayambhu-Siddhanātha** of the *agrahāra* town **Hāvēri** by **Tipparasa**, the son of **Dommara Nāraṇadēva**, the *vrittimanta* of the *agrahāra*. The grant was made at the instance of *Samastadēśādhipati* **Viṭharasa**, the agent of *Mahāpradhāna* and *Sarvādhikāri* **Tipparasa.** Viṭharasa is stated to be the uncle (*māva*), possibly of the latter.

### Text

1 ⓒ ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರೌಢಪ್ರತಾಪ-
2 ಚಕ್ರವರ್ತ್ತಿ ಶ್ರೀವೀರಮಹದೇವರಾಜ್ಯೋದಯದ ತತುಪಾದಪದ್ಮೋಪಜೀವಿ ಶ್ರೀಮ-
3 ನುಮಹಾಪ್ರಧಾನಂ ಸರ್ವಾಧಿಕಾರಿ ತಿಪ್ಪರಸರ ರಾಜ್ಯಧರಧಾರನಿರ್ವ್ಯಾರ[ಕಂ]
4 ಸಮಸ್ತದೇಶಾಧಿಪತಿ ಮಾವ ವಿಠರಸರ ನಿರೂಪದಿಂ ಶ್ರೀಮದನಾದಿಯ ಪಿರಿಯ-
5 ಗ್ರಹಾರಂ ಹಾವೇರಿಯ ವೃತ್ತಿಮಂತ ದೊಂಮರ ನಾರಣದೇವನ ಮಗ ತಿಪ್ಪರಸನು
ಸ್ವಸ್ತಿ (ಸ)-
6 ಸಕವರುಷ ೧೧೯೧ನೆಯ ಶುಕ್ಲಸಂವತ್ಸರದ ಕಾರ್ತಿ[ಕ*] ಶುದ್ಧ ೧ ಸೋಮವಾರದಂದು
7 ಶ್ರೀಮದನಾದಿಯ ಪಿರಿಯಗ್ರಹಾರಂ ಹಾವೇರಿಯ ಶ್ರೀಸ್ವಯಂಭುಸಿದ್ಧನಾಥದೇವ-
8 ರ ಸ್ಥಳಂಗಳ ತಳಭೋಗಕ್ಕೆ ಪ್ರತಿವರುಷವ ಪಿಂಡಳಿಗೆಯಾಗಿ ತಿಱುವ ಗ ೧ ಮ ೫ ನೊ ೮
9 ಸಿದ್ಧನಾಥದೇವರಿಗೆ ಅಖಂಡದೀಪ್ತಿಗೆ ನಡಸುವಂತಾಗಿ ಧಾರಾಪೂರ್ಬ್ಬಕಂ ಆಚಂದ್ರಾರ್ಕ್ಕ-

10 ನ್ಯಾಯಿಯಾಗಿ ಕೊಟ್ಟರು ಯೀ ಧರ್ಮ್ಮವಂ ಅರಸುಗಳು ಮಹಾಜನಂಗಳುಂ ಪ್ರತಿಪಾ-
11 ಳಿಸುವರು ಮಂಗಳ ಮಹಾಶ್ರೀ ಶ್ರೀ ಶ್ರೀ ಸ್ವದತ್ತಾಂ ಪರದತ್ತಾಂ ವಾ ಯೋ ಧರ್ಮ್ಮಂ
12 ಹರತೇ(ಂ) ನರ[ಃ] ಷಷ್ಟಿರ್ವ್ವರುಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥ ◎

## No. 254

*(B. K. No. 126 of 1932-33)*

KALLIHĀḶ, HAVERI TALUK, DHARWAR DISTRICT

*Hero-stone in front of the temple of Durgāparamēśvari*

**Mahādēva—A. D. 1269-70**

This record referring itself to the reign of **Mahādēva** is dated in the cyclic year **Śukla**. Further details are not given. During the reign of Mahādēva the cyclic year *Śukla* corresponded to **A. D. 1269-70**.

It records a grant of land to a hero (name lost) who died in a fight in the presence of the *Heggaḍe*, the *Gāvuṇḍu* and others of **Ajjaḍi**.

**Text**

1 ◎ ಸ್ವಸ್ತಿ ಶ್ರೀಮತು ಯಾದ[ವ]ನಾರಾಯಣಂ ಭುಜಬ[ಳ*]ಪ್ರತ(ಾ)ಪ ಚ-
2 ಕ್ರವರ್ತ್ತಿ ವೀರಮಹಾದೇವ ಪ್ರಿಥ್ವೀರಾಜ್ಯಂಗೆಯಲು ಸುಕ್ಲ ಸೌಭ (ಸಂವತ್ಸ)—
3 ರೆದೆಲಜ್ಜಡಿಯ ಸಮರ್ತ್ತ(ಸ್ತ) ಪ್ರಜೆ ಹೆಗ್ಗಡೆ ಗಾಂಡು ಮುಕ್ಷ್ಯ[1]ವಾಗಿ
4 . ಹುಲಿಯ ಮೇಚ ಕಾದಿ ಕಟಿತಿಜೆದು ಕುಜೆಯ ಹೊಲ[ನಂ]
5 ಕಲಿಗೊಟು ಹಡದ ಮಾನ್ಯದ ಮ(ಮೇ?)ಜೆ ಸುರಲೋಕ ಪ್ರಪಿಥನಾದ ಮಂ-
6 ಗಳ [ಮ*]ಹಶ್ರೀ ಶ್ರೀ ಶ್ರೀ

## No. 255

*(B. K. No. 77 of 1932-33)*

HĀVĒRI, HAVERI TALUK, DHARWAR DISTRICT

*Hero-stone near the Śiddhēśvara temple*

**Rāmachandra—A. D. 1275**

This inscription is dated in the cyclic year **Yuva** during the reign of **Rāmadēvā**, **Chaitra ba. 11, Sunday**, corresponding to **A. D. 1275, March 11, Sunday**.

It commemorates the death of **Jōyi—Nāyaka** of **Hāvēri** who marched against (Narasiha) of **Dōrasamudra** and died in the presence of **[Jōya]–Daḷavaya**.

1 **Mistake for** ಖ್ಯ.

### Text

1 ◎ ಸ್ವಸ್ತಿ ಶ್ರೀಮತು ಯಾದವನಾರಾ[ಯ*]ಣಂ ಭುಜಬಳಪ್ರತಾಪಚಕ್ರವರ್ತ್ತಿ ವೀರರಾಮ ದೇವರಾಜ್ಯಾ-
2 ಭ್ಯುದಯ[ದಂ*]ದು ಯುವಸಂವತ್ಸರದ ಛೈತ್ರ ಬ ೧೧ ಆದಿವಾರ । ಹವರಿಯ . . ವ ನಾಯಕ-
3 ನ ಮಗನು ಜೋಯಿನಾಯಕನು ದೋರಸಮುದ್ರದ ನ[ರಸಿಹ]ನ ಮೇಲೆ ಯ-
4 ತ್ತಿ ನಡದು ಕುದುರೆಯ ಘಟ್ಟನ ಮೇಲೆ [ಜೋ]ಯ ದಳವಯನ ಮುಂದೆ
5 ತಳಿತಿಱಿದು ಸುರಲೋಕ ಪ್ರಾಪ್ತನಾದನು ಮ[ಂ*]ಗಳ ಮಹ-
6 ಶ್ರೀ

## No. 256

(*B. K. No. 11 of 1932-33*)

DĒVAGĒRI, HAVERI TALUK, DHARWAR DISTRICT

*Hero-st nes in the temple of Yellamma*

### Rāmachandra—A. D. 1277

This inscription is dated in the **7th year** of the reign of **Rāmachandradēva, Iśvara, Kartika śu., Thursday**. The *tithi* is lost. In the cyclic year *Īśvara* there were two *Kārtikas* and in the *śuddha-paksha* of both the months the following *tithis* occurred on Thursdays.

| | | | |
|---|---|---|---|
| *Adhika-Kārtika* | *Śu*. 2 = | **A. D. 1277**, | September 30. |
| Do. | *Śu*. 9 = | Do. | October 7. |
| *Nija-Kārtika* | *Śu*. 8 = | Do. | November 4. |
| Do. | *Śu*. 14 = | Do. | Do. 11. |

In the absence of the exact *tithi*, it is difficult to find out the equivalent.

It states that **[Talli]-Nāyaka** son of **[Nā]geya-Rāhuta** died in a battle. The record is much damaged.

### Text

*First Section*

1 ಸ್ವಸ್ತಿ ಶ್ರೀಮತು ಯಾದವ[ನಾರಾ]ಯಣ ಭುಜಬಳಪ್ರ-
2 ಹುಡಪ್ರತಾಪಚಕ್ರವರ್ತ್ತಿ ಶ್ರೀ[ರಾಮ]ಚಂದ್ರದೇವರ ರಾ[ಜ್ಯಾಭ್ಯು]-
3 ದಯದ ಏಳನೆಯ ಯೀಸ್ವರಸಂವಛರದ ಕಾರ್ತ್ತಿಕವ ಸು[ದ್ಧ] . .
4 ಗುರುವಾರದಂದು . . . . . ದ ಕಾಳಗ .

*Second Section*

5 . ಂಮದ . . . . . ಸಂಗ್ರಾಮದೊಳಗೆ ಮಾ-
6 [ಯಿದೇ]ವ . . . . . . . . . . . ನೆ[1]ಗೆಯರಾಹು-

---

1 Probably mistake for ನಾ.

7 ತನ ಮಗ [ತಲ್ಲಿ]ನಾಯಕನಂ ತಳ[ತು] ಯಿಱಿದು ಮಡಿದು
8 ಸುರಲೋಕಪ್ರಾ[ಪ್ತಂ] . . . [ಮಂಗಳ] ಮಹಾಶ್ರೀ ಶ್ರೀ ಶ್ರೀ

## No. 257

*(B.K. No. 107 of 1932–33)*

HIRĒLINGADAHALLI, HAVERI TALUK, DHARWAR DISTRICT

*Hero-stone near the temple of Kalmēśvara in S. No. 68*

**Rāmachandra – A.D. 1280**

This inscription is dated in the 10th year of the reign of **Rāmachandradēva, Pramāthi, Phālguṇa ba. 5, Monday**. The details are irregular. The *tithi* corresponds to **A.D. 1280, February 5.** The week-day however was **Thursday**.

It records the death of **Mallaya-Nāyaka,** called the child (*śiśu*) of the **Eighteen** *Samayas* (*Hadinentu Samaya*) in a fight in the presence of the assembly of the *prithvīnāḍu* in **Nagarakhaṇḍa**. **Tiḷuvaḷḷi** is mentioned.

### Text

1 ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರೌಢಪ್ರ–
2 ತಾಪಚಕ್ರವರ್ತ್ತಿ ಶ್ರೀವೀರರಾಮಚಂದ್ರದೇವರಾಯ ರಾಜ್ಯೋದಯದ ಹ–
3 ತೆನೆಯ ಪ್ರಮಾಥಿಸಂವತ್ಸರದ ಫಾಲ್ಗುಣ ಬಹುಳ ೫ ಸೋಮವಾರದಂದು
4 ಶ್ರೀಮತು ನಗರಖ[ಂ]ಡನಾಡೊಳಗೆ ಪ್ರಿಥ್ವೀನಾ[ಡು] ನೆರದು ತಿಳುವಳ್ಳಿಯ ಕೋಟೆ
5 [ಸೆ]ಯ ಕೊಂಡು ತಳ್ತಿಱಿದು ಮ[ಡೆ]ದು ಸುರಲೋಕಪ್ರಾಪ್ತನಾದ ಹದಿನೆಂಟ್ಟು
6 [ಸ]ಮಯದ ಸಿಸು ಯಾಲೂರ ಮಲ್ಲಯನಾಯ್ಕ ಮಂಗಳ ಮಹಶ್ರೀ ಶ್ರೀ

## No. 258

*(B.K. No. 38 of 1934–35)*

KADARMAṆḌALGI, RANEBENNUR TALUK, DHARWAR DISTRICT

*Hero-stone in a private site near the temple of Hanumān*

**Rāmachandra —A.D. 1281**

This inscription is dated in the **12th year (?)** of the reign of **Rāmachandradēva, Vishu, Śrāvaṇa ba. Ashṭami, Friday**, corresponding to **A.D. 1281, August 8, Friday.**

It records the death of **Sura–gauḍa**, probably the disciple of **Sānti-Bhaṭṭāraka.**

### Text

*First Piece*

1 ಸ್ವಸ್ತಿ ಶ್ರೀಮತು ಯಾದವನಾರಾಯಣ [ಭು]ಜ–
2 ಬಳಪ್ರ್ರತಾಪಚಕ್ರವರ್ತ್ತಿ ವೀರರಾಮಚಂದ್ರದೇವ ರಾ–

*Second Piece*

3 ಜ್ಯೋದಯದ ವಿಷುಸಂವಛರದ ೧೨ ಶ್ರವಣ ಬಾಹುಳ ಅಸ್ಟ-
4 ಮಿ ಸುಕ್ರವರದಲು ಸಾಂತಿಭಟ್ಟಾರಕರ ಕುಡಲು ಸುರ-

*Third Piece*

5 ಗೌಡ ಸುರಲೋಕಪ್ರಾಪ್ತ ಶ್ರೀ

## No. 259

*(B. K. No. 21 of 1933-34)*

KĀGINELLI, HIREKERUR TALUK, DHARWAR DISTRICT

*Hero-stone set up near the Vīrabhadradēva temple*

**Rāmachandra—A. D. 1282**

This inscription belonging to the reign of **Rāmachandradēva** is dated in **Śaka 1204, Chitrabhānu, Mārgaśira ba. 7, Sunday,** corresponding to **A. D. 1282, November 23, Sunday, f. d. t. .42.**

It commemorates the death of **Bugujara Siddayya** of **Kāgenele,** who died in a fight when **Sōyidēva** of **Bandaṇike,** attacked **Taravūr.** The valour of the martyr is extolled in verse.

### Text

*First Panel*

1 ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರವುಢಪ್ರತಾ-
2 ಪಚಕ್ರವರ್ತ್ತಿ ಶ್ರೀವೀರರಾಮಚಂದ್ರದೇವ ವಿಜಯರಾಜ್ಯೋದಯದ ಸಕವರ್ಷದ ೧೨೦೪ ಚಿತ್ರ-
3 ಭಾನುಸ[ಂ*]ವತ್ಸರದ ಮಾರ್ಗ್ಗಸಿರ ಬಹುಳ ೭ ಯಾದಿತ್ಯವಾರದಂದು ಸ್ವಸ್ತಿ ಶ್ರೀಮನು-
4 ಮಹಾಮಂಡಳೇಸ್ವರಂ ನಿಗಳಂಕಮಲ್ಲ ಬಂದಣಿಕೆಯ ಸೋಯಿದೇವನು ಪರಿದಾಳಿ-
5 ಯಿಟ್ಟು ತರವೂರ ಮುತ್ತಿದಲ್ಲಿ ಕಾಗೆನೆಲೆಯ ಬುಗುಡರ ಸಿದ್ದಯ್ಯನು ವೈರಿ-
6 ಬಲಮಂ ತಳ್ತಿಱಿದು ಕೊಂದು ರಣಜಿತನೆನ್ನಿ ಸುರಲೋಕಪ್ರಾಪ್ತನಾದ ವೀರ-
7 ವೆಂಕೆಂದಡೆ

*Second Panel*

8 ಕೊಡದರ್ಪರಿಸೈನ್ಯಸಂಕುಳ[ಕರಿ]ಗಳ ತದ್ಭುಜದೀ ಕುಠಾರದಿಂ ಕಡಿದು ಮಹಾಜಿರಂಗ[ಜಿ]ತನು-
9 ಗ್ರಬಳಾಂನ್ವಿತವೀರತೇಜವಂ ಪಡೆದು ಜಗತ್ರಯಂ ಪೊಗಳಲಣ್ಮದ ಗಂಡ[ರ]ದೇವ[ನಂ]ದ-
10 ಡೀ ಕಾ(ಕ)ಡುಗಲ ಪೋರ್ವ್ವನುರ್ವ್ವಿಗೆನುತಿಪ್ಪುದು ಲೋಕಪ್ರಸಿದ್ಧ ಸಿದ್ಧನನು ॥ವೃ॥ ಪು
11 . . . . . . . . . ರದಾ[ಣಿ ಸೋ]ಮಭೂಮಿಪಂ ಬೆಸಸಲು ಧಾಳಿಯ
12 . . . . . . . . ರಕೊಟ್ಟ . . . . ಮವ ಮಾಡಿ ಮಂಡಳಿಕ ಬೀರನ
13 . . . . . . . ರ್ತ್ತದೊಳು ಬಿದ್ದನು ಬುಗುಡರ ಸಿ-
14 . . . . . . . . . ನೊರ್ವ್ವನ ನೂರ್ವ್ವರೆಂದು ಪೊಮ-

*3rd Panel*

15 ಳಿಗಜೆಯಲು ದಿವಿಜಾಂಗನೆಯರು ಪೋಯ್ದರು ಸಿವನಲಿ ಮುಕುತಿಯನು ಸಿದ್ಧಿವಡೆ-
16 ದಂ ಸಿದ್ಧನು ॥

## No. 260

*(B. K. No. 123 of 1933-34)*

BIJĀPUR, BIJAPUR TALUK, BIJAPUR DISTRICT

*Pillar at the south-entrance of the Ark-killah*

**Rāmachandra—A.D. 1283**

This inscription belonging to the reign of **Rāmachandrarāya** is dated in **Śaka 1205, Svabhānu, Kārtika ba. 30, Monday**. But for the week-day, the details correspond to **A.D. 1283, November 29**. The week-day was **Saturday**. In the previous year, *Chitrabhānu*, which was *Śaka* 1205 (current) the details regularly correspond to **A.D. 1282, November ba. 2, Monday**. This is probably the intended date.

It registers a gift of paddy and oil for the offerings of god **Narasiṁhadēva** of **Vijeyāpura**, also known as *Dakshiṇa-Vāraṇāsi*. The donation was made by *Sarvādhikāri* **Dēvaya-Nāyaka**. The gift is stated to have been made after worshipping the five *Huris*.

### Text

1 ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬ-
2 ಳಪ್ರೌಢಪ್ರತಾಪಚಕ್ರವರ್ತ್ತಿ ಶ್ರೀರಾಮಚಂದ್ರರಾ-
3 ಯ ವಿಜಯರಾಜ್ಯೋದಯದ ಶಕವರ್ಷ ೧೨೦೫ನೆಯ ಸ್ವ-
4 ಭಾನುಸಂವತ್ಸರದ ಕಾರ್ತ್ತಿಕ ಬ ೩೦ ಸೋಮವಾರದಂ-
5 ದು ಶ್ರೀಮತ್ಸರ್ವ್ವಾಧಿಕಾರಿ ದೇವಯನಾಯಕರು ಶ್ರೀ[ಮ]-
6 ದ್ದಕ್ಷಿಣವಾರಣಾಸಿ ವಿಜೆಯಾಪುರದ ಅಯ್ದು ಹುರಿ-
7 ಗಳನು ಪೋ(ಪೂ)ಜ್ಜ(ಜಿ)ಸಿ ಶ್ರೀಮನ್ನರಸಿಂಹ್ವದೇವರ್ಗ್ಗೆ ಉ-
8 ದಯದ ಮಂಗಳಾರತಿಯ ಸಮಯದ ನೈವೇದ್ಯ-
9 ಕ್ಕೆ ಆ ಸ್ಥಳದಲು ಅಡದವಣವಾಗಿ ಹನ್ನಿ ಧಾನ್ಯ-
10 ವಂ ಕೊಂಡು ಮಾಡುವವರಲ್ಲ ಹೊಂಗೆ ಸೊಲ್ಲ-
11 ಗೆ ಧತ್ತವಂ ಪಡೆದು ಕೊಟ್ಟರು ಈ ದರ್ಮ್ಮವನಾತ್ತ ಅಯ್ದು
12 ಹುರಿಗಳು ಪ್ರತಿಪಾಳಿಸುವರು ಆ ದೇ-
13 ವರ ನಂದಾದೀವಿಗೆಗೆ ಅಡದವಣವಾಗಿ ಎಣ್ಣೆಯ
14 ಕೊಂಡು ಮಾಡುವ ಕುಂಚಡಿಗಿತ್ತಿಯ-
15 ರ ಪಸಾರಂಗಳಲ್ಲಿ ಪಳಿಗೆಯೆಣ್ಣೆಯ ಧಾ-
16 ರಾಪೂರ್ವ್ವಕಂ ಮಾಡಿ ಬಿಟ್ಟರು ಮಂಗಳ
17 ಮಹಾಶ್ರೀ ಶ್ರೀ ಶ್ರೀ

## No. 261

*(B. K. No. 99 of 1932-33)*

HĀVĒRI, HAVERI TALUK, DHARWAR DISTRICT

*Hero-stone on the tank bund near the temple of Kalamēśvara*

### Rāmachandra— A. D. 1284

This inscription is dated in the cyclic year **Svabhānu** during the reign of **Rāmachandradēva**, **Phālguṇa ba. 10· Sunday**, corresponding to **A.D. 1284**, **March 9**, **Sunday**, **f.d.t. ·50**.

It states that the stone erected is the hero-stone of the son (name not given) of **Bommaya-Nāyaka** who is described as the son (*maga*) of the Four-Hundred (*mahājanas*).

#### Text

1 ಸ್ವಸ್ತಿ ಶ್ರೀಮತು ಯಾದವನಾರಾಯಣ ಭುಜಬಳಪ್ರವುಢಪ್ರತಾಪಚಕ್ರವರ್ತ್ತಿ ಶ್ರೀರಾಮ-
2 ಚಂದ್ರದೇವ ರಾಜ್ಯೋದಯದ ಸ್ವಭಾನುಸಂವತ್ಸರದ । ಫಾ[ಲ್ಗು]ಣ ಬ ೧೦ ಆದಿವಾರ ದಂದು(೦)
3 ನಾನೂರ್ವ್ವರ ಮಗ ಬಾವಿಯ ಬೊಂಮಯನಾಯಕನ ಮಗನ ಬೀರಗಲ್ಲು ಮಂ-
4 ಗಳ ಮಹಾಶ್ರೀ ಶ್ರೀ ಶ್ರೀ

## No. 262

*(B. K. No. 9 of 1934-35)*

BENKANAKONḌA, RANEBENNUR TALUK, DHARWAR DISTRICT

*Mahā-sati stone set up near the southern entrance into the Kalamēśvara temple*

### Rāmachandra— A. D. 1284

This inscription belonging to the reign of **Rāmachandradēvarāya** is dated in the **15th year** of his reign, **Tāraṇa**, **Bhādrapada śu. 10**, **Monday**, corresponding to **A.D. 1284**, **August 21**, **Monday**, **f.d.t. ·30**.

It states that **Chaṭaya-Nāyaka** of **Muḷugunda** died with his wife to keep the word given to their master, for which act, the *kammata* of **Beḷugali** was bestowed upon their family for ever.

#### Text

*First Piece*

1 ◎ ಸ್ವಸ್ತಿ ಶ್ರೀಮತು ಯಾದವನಾರಾಯಣಾ ಭುಜಬಳಪ್ರೌಢಪ್ರತಾಪಚ-
2 ಕ್ರವರ್ತ್ತಿ ಶ್ರೀವೀರರಾಯ ರಾಮಚಂದ್ರದೇವರಾಯ ರಾಜ್ಯೋದಯದ ೧೫ ತಾ-
3 ರಣಸಂವತ್ಸರದ। ಭಾದ್ರಪದ ಸುಧ ೧೦ ಸೋ । ಸ್ವಸ್ತಿ ಶ್ರೀಮತು ಮುಳಗುಂದ-

4 ದ ನರಲೋಕ[ವೀರ*] ಜಗದಾಳ ಬೊಮಿದೇವ ಜಂಗುಳಿವಂನೆಯರಗಂಡಗೆ [ಎ]ಕಟಿಕ ಚಟಯ-
5 ನಾಯಕನು ತಂನ ಹೆಂಡತಿಸಹಿತ ಯಿಬರುಂ ಘೊಡೆಯಂಗೆ ಕೊಟ್ಟಧಾಸೆಗೆ
6 ತಲೆಗೊಟ್ಟರು ಯದಕ್ಕೆ ಮೆಟಿ ಬೆಳಗಲಿಯ ಕಂಮತವನು ಮಕ್ಕಳು ಮಕ್ಕಳು ದಪದಿ
7 ಕೊಟ್ಟರು। ಭೂಮಿವು ಚಂದ್ರನು ಪೃಶ್ಯನಬರ॥ ಯಿದಕ್ಕೆ ಅಳುಪಿದಡೆ ವಾರಣಾ-

*Second Piece*

8 ಸಿಯಲಿ ಕ(ಂ)ವಿಲೆಯ ಕೊಂದ ದೋಸ। ಸ್ವದತಂ ಪರದತಂ ವಾಪ್ಪೊತಿ॥ ಮಂಗಳ ಮ-
9 ಹಾಶ್ರೀ ಶ್ರೀ ಶ್ರೀ ⊚

## No. 263

*(B. K. No. 52 of 1934–35)*

MENASINHĀL, RANEBENNUR TALUK, DHARWAR DISTRICT

*Hero-stone set up near Kalamēśvara temple*

**Rāmachandra—A. D. 1285**

This inscription is dated in the **16th year** of the reign of **Rāmachandrarāya Svabhānu, Māgha su. 1, Monday.** In *Subhānu* – A. D. 1284 *Māgha su.* 1 fell on Thursday, January 20. In the next year *i.e.*, Tāraṇa, the details regularly correspond **to A.D. 1285, January 8, Monday**. The latter probably is the intended date.

It records the death of a hero (name lost) and seems to register a grant of land made in his memory.

**Text**

*First Piece*

1 [ಸ್ವಸ್ತಿ] ಶ್ರೀಮತು ಯಾದವನಾರಾಯಣ [ಭು*]ಜಬಳಪ್ರೌಢಪ್ರತಾಪಚಕ್ರವರ್ತಿ ಶ್ರೀ-
2 [ರಾಮ]ಚಂದ್ರರಾಯ ವಿಜಯರಾಜ್ಯೋದಯದ ಹದಿನಾರನೆಯ ಸ್ವಭಾನುಸಂವ-
3 ತ್ಸರದ ಮಾಘ ಸು ೧।ಸೋ। [ಮ]ಣಸಿ . . . ಯ . . . . ಗಲಿಗನು ಪೂರ ಅಳಿವಿನಲ್ಲಿ ಕಾದಿ
4 ಸುರಲೋಕ ಪ್ರಾಪ್ತನಾದ ॥ . . . . . . . . . . ಮಾನ್ನೆಯ . . . . ಣ-
5 ಯ . . . ಮನೆಯ . . . . . ಯರುಂ. . . ಕ್ಷೇತಗವುಡ .
6 . . ಮೆಟಿ

*Second Piece*

7 . . ರದ . . . . . ಭೂಮಿ . . . . ಕೆಯಿಂ ಬತಗೆಣ . . . . .
8 ದಡಕೆ . . . . . . . . ನಾದರೂ . . . . . . . ಬರು
9 ಮಂಗಳ ಮಹಾಶ್ರೀ ಶ್ರೀ ಶ್ರೀ ಯಿದನು ಯಳಿಪಿದವ .
10 ತದನು ನೆತ್ತರುಕೆಯು . .

## No. 264

*(B.K. No. 140 of 1932–33)*

KITTŪR, HAVERI TALUK, DHARWAR DISTRICT

*Slab leaning against the front wall of the temple of Saṁgamēśvara*

### Rāmachandra—A.D. 1287

This inscription is dated the **19th year of** the reign of **Rāmadēva, Sarvajit, Mārgaśira su. 7, Thursday,** corresponding regularly to **A.D. 1287, November 13, Thursday.**

It registers a grant of land made by *Mahāmaṇḍalēśvara* **Jāvugidēva Rāṇeya** for the worship and offerings to the gods **Kalināthadēva** and **Mūlasthāna-Jakkēśvaradēva** at **Hiriya-Kittūr** and for feeding the Brahmins and ascetics. The gift was entrusted to **Bāchedēva**. Hiriya-Kittūr is stated to be situated in **Hichageya-nāḍu.** Jāvugidēva is given the epithet *Chauhāṇa-rāya-rāutta-mōhana.*

### Text

1 ◎ ಸ್ವಸ್ತಿ ಶ್ರೀ ಯಾದವನಾರಾಯಣಂ ಭುಜಬಳಪ್ರೌ-

2 ಢಪ್ರತಾಪಚಕ್ರವರ್ತ್ತಿ ಶ್ರೀವೀರರಾಮದೇವರಾಯ ವಿಜಯರಾಜ್ಯೋದ-

3 ಯದ ೧೯ನೆಯ ಸರ್ವ್ವಜಿತುಸಂವತ್ಸರದ ಮಾರ್ಗ್ಗಸಿರ ಸುಧ ೭ ಬೃ[ಹ*]ಸ್ಪತಿ-

4 ವಾರದಲು ಸ್ವಸ್ತಿ ಶ್ರೀಮಾಣಿಕ ಚೌಹಾಣರಾಯರುಉತ್ತ[ಮೋಹ]ನಂ ಶ್ರೀ-

5 ಮನುಮಹಾಮಂಡಳೇಸ್ವರಂ ಜಾವುಗಿದೇವರಾಣೆಯರು ಹಿಚಗೆಯನಾಡೊಳಗಣ

6 ಹಿರಿಯ ಕಿತೂರ ಶ್ರೀಕಲಿನಾಥದೇವರು ಮೂಲಸ್ಥಾನ ಜಕ್ಕೇಸ್ವರದೇವರ ಅಂಗಭೋಗ
ದೀಪವರ್ತ್ತಿ-

7 ಗೆವು ಬ್ರಾಹ್ಮಣರಿಗೆವು ತಪೋಧನರಿಗೆವು ದಿನಂಪ್ರತಿ ಅಯ್ವರಿಗೆ ಛತ್ರವಾಗಿ ನಡಸದೇಕೆಂ-

8 ದು ಬಿಟ್ಟ ಭೂಮಿ ಪುರಿಂ ಪಡುವಲು [ಗೊ]ಗ್ಗನೂಜಿ ಬಟ್ಟೆಯಿಂ ತೆ[ಂ*]ಕಲು ಮತ್ತರು
೨ ಅದಱಿಂ

9 ಬಡಗಲು ಭೈರವದೇವರಿಗೆ ಮತ್ತರು ೧ ದೇವ[ಕೊಡ]ವೆಯ ನೈರುತ್ತ್ಯದ ಗೋಟಿನ ಮೊಗೆ ಮ-

10 ತ್ತರು ೨ ದೇವರ ಬಡದೆಸೆಯ ಮಳವ ಅರೆವತ್ತರು ದೊಡ್ಡಾಲದ ಮೂಡದೆಸೆ-

11 ಯ ಕುದೋರಿಂಟಿ ಜಕ್ಕೇಸ್ವರದೇವರ ಮುಡಣ ಮತ ಮಂತೆದ ನೈರಿತ್ಯದಲಿ ಮನೆ ಊರ
ಮೂಡ-

12 ದೆಸೆಯ ಕುಡಿಕೆ ಒಂದು ಯಿಂನ್ತಿದನು ಸರ್ವ್ವಬಾಧೆ ಪರಿಹರವೆ[ಂ*]ದು ಸರ್ವ್ವಮಾನ್ಯವಾ-

13 ಗಿ ಶ್ರೀಕಲಿನಾಥನ ದಿಬ್ಯಶ್ರೀಪಾದಪದ್ಮಾರಾಧ[ಕ*]ರಪ್ಪ ಬಾಚೆದೇವಂಗಳಿಗೆ ಧಾರಾಪೂರ್ವ್ವ
[ಕ*]ವಾ-

14 ಗಿ ಬಿಟ್ಟ ಧರ್ಮ್ಮ ಯಿದನು ಜಾವುಗಿದೇವರಾಣೆಯರ ಮನೆಯ ಅಧಿಕಾರಿ ತಿಪ್ಪೆಯರ ಕಾ-

15 ಳಪಟ್ಟ ಪೂರೊಡೆಯ ಸೋವರಸರು ಬೊಂಮರ್ಸರು ದಿವಕರದೇವನು ಯೆಂಟ್ಟುಹಿಟ್ಟು ಪಂ-

16 ಚಮಠ ಸಮಸ್ತ ಪ್ರಜೆಗಳುಂ ಕೂಡಿಕೊಂಡು ಧರ್ಮ್ಮವನು ಸ್ವಧರ್ಮ್ಮದಿಂದ ಆಚಂದ್ರಾರ್ಕ್ಕ-

17 ತಾರಂಬರಂ ಪಾಲಿಸುವರು ಮಂಗಳ ಮಹಾಶ್ರೀ। ಸ್ವದತಂ ಪರದತ್ತಂ ವಾ ಯೋ ಹ-

18 ರೇತು ವಸುಂಧರಾ ಷಷ್ಟಿರ್ವ್ವ[ರ್ಷ]ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ॥ ದೇವಬ್ರಹ್ಮ

## No. 265

CHAUḌADĀNPUR, RANEBENNUR TALUK, DHARWAR DISTRICT

*Dhvajastambha in the Muktēśvara temple*

**Rāmachandra—A. D. 1288**

This inscription in Sanskrit verse is very badly damaged. It belongs to the reign of **Rāmachandradēva** and is dated in **Śaka 1210**, **Sarvadhāri**, **Śrāvaṇa śu. 5**, **Monday** corresponding to **A. D. 1288**, **July 5**, **Monday**. It seems to refer to the erection of a *Kīrtistambha* by *Sainyādhipati* [**Sāḷiva**].

### Text

1 ◎ ಸ್ವಸ್ತಿ ಶ್ರೀ ಸಕವತ್ಸರ ೧೨೧೦ನೆಯ ಸರ್ವ್ವಧಾರಿಸಂವತ್ಸರದ ಶ್ರಾವಣ ಸುದ್ಧ ೫
2 ಸೋಮವಾರದಂದು ಸ್ವಸ್ತಿ ಶ್ರೀ ರಾಜಾಧಿರಾಜ ಅಜ್ಞಾರಾಮ ಪ್ರತಿಜ್ಞಾಪರ[ಶು]ರಾಮ ಯಾ-
3 ದವಕುಳಕಮಳಕಳಿಕಾವಿಕಾಸಭಾಸ್ಕರ [ದ್ವಾ]ರಾವತೀಪುರವರಾ[ಧೀ]ಸ್ವರ ವಿಷ್ಣುವಂ-
4 ಶೋದ್ಭವ ಮಾ[ಳ]ವಿಯಮಲ್ಲಾಹಿತರಾಯರಪೆಲ್ಲ ಗುರ್ಜ್ಜರರಾಯವಾರಣಾಂಕುಸ । ತೆ-
5 ಲಂಗರಾಯಸಿರಕಮಳ[ಸ್ಕಂದ]ನಂದೋಹಮರ್ದನ । [ಶ್ರೀ . . ನಿಳಯ] ಧೋಜ
ಧೂಪಾಳವ್ಯಾ-
6 ಳವಿದ್ರಾವಣ [ಲಙುಮಿ]ದೇವ . . . ವನದಹನದಾವಾನಳ . . . [ಯಿ]ತ್ಯಾದಿ
ಸಮಸ್ತ ರಾಜಾವಳೀ-
7 ವಿರಾಜಮಾನ ಶ್ರೀಮತು ಯಾದವನಾರಾಯಣಂ ಭಜಬಳಪ್ರಉಢಪ್ರತಾಪಚಕ್ರ-
8 ವರ್ತ್ತಿ ಶ್ರೀರಾಮಚಂದ್ರ[ದೇವ]ರಾಯ ರಾ[ಜ್ಯ]ವಿಜಯೋದಯದ ಮಹಾಪ್ರಧಾನ ಹಸ್ತಿ
. . .
9 . . ಶ್ರೀ ಕಂನಾ . . . . . ನಕಾಳೇ ಪ್ರವರ್ತ್ತಮಾನೇ ಕಂನ್ನಾಡ[ದೇಸೇ] [ಗು]
ತ್ತೊಳಲದೇಸೇ . . . . . .
10 . . ಮಧ್ಯೇ ಗೋಹ[ನಾಮಗ್ರಾಮೇ] ತುಂಗಭದ್ರಾಯಾಂ . . . [ಮಧ್ಯೇ]
ಮುಕ್ತಿಕ್ಷೇತ್ರೇ ಶ್ರೀಶಿದ್ಧಸಿವ-
11 ದೇವ . . . . . ಸ್ವರದೇವಸಂನಿಧೌ ಸ್ವಸ್ತಿ ಶ್ರೀಮ . . . . . .
. ಮಂ[ಡ*]ಳೇಸ್ವರ ಅರಿರಾ-
12 [ಯ]ವಿಭಾಡ [ಕಟಕ] . . . ಸ್ಥಾಪನಾಚಾರಿಯ ಹೊಯಿಸಣರಾಯದಿಸಾಪಟ್ಟ . . .
ನಿರಾಯರಕ್ಷಪಾಳಕ
13 ಸಕಳಸೈಂನ್ಯಾಧಿಪತಿ ರಾಣಕ ಶ್ರೀಸಳುವಾ . ಶ್ಯೋ ದೇವಣ್ಣಯ್ಯಪ್ರಪೌತ್ರಾಯ ಸಿ[ಂಮ]
ದೇವಸೈಂ-
14 ನ್ಯಾಧಿಪತಿಪೌತ್ರಾಯ ಬಲ್ಲಾ[ಳ]ದೇವಸೈಂನ್ಯಾಧಿಪತಿಪುತ್ರಾಯ ಶ್ರೀಸಾಳವಸಿಂಮದೇವಸೈಂ-
15 ನ್ಯಾಧಿಪತಿ[ನಾಮತ] . . . . . . . ಶ್ರೀಸಾಳುವೆಯಾಖ್ಯ ಕೀರ್ತ್ತಿಸ್ತಂಭ
ಪ್ರತಿಷ್ಠಾಧರ್ಮ್ಮೋ ಯಾವತು
16 ಚಂದ್ರಾರ್ಕ್ಕಮೇದಿನೀ ತಾವತು ಸ್ಥಿರೋ[ಭೂತ್] ಮಂಗಳ ಮಹಾಶ್ರೀ ಶ್ರೀ ಶ್ರೀ . . . .
17 ನೂರ . . . . . . . ಯಶ್ಯೋದ್ಧ . . ನೇನ ಮಹಾ . . . .
. . [ಸಿತ]ದಂತಿ . . . ಕೇಣ । . . . . [ನಾಳಾಯ]

18 . . . ಸರೋರುಹ . . ವೃಧಾಂ . . . . . [ಕಳಾಪ] . .
. . . ಕಾಂ–
19 ತಿಕ . . ಕಾಂತಿ . . . . . . . ಹಂಸ . . . . . . . ಕಾಳ . . .
ಗಳಿತ . . . . . . .
20 . . . . . . . ಮಹಾ◎ ಅವ್ಯಾದವ್ಯಾಹತ . . . . . . . ಧಾನಯುಂ
21 . . . . . ಖಟ್ವಾಂಗ . . . . . . . . . [ಹಸ]
22 . . . . ಹತಂ। ವಾಮಹಸ್ತ . . . . . . ಕೃತ . . . ಸಿರಂ ಸರ್ಪ್ಪ
ಯಜ್ಞೋಪ–
23 ವೀತಂ। . . . . . . . . . ಕ್ಷೇತ್ರಪಾಳಂ ನಮೋಸ್ತು[ತೇ] ॥೩॥. . . .
24 ದಪಿ . . ಘನಮನವ . . . . . ಹೇ ಮೇ[ರು] ಮಂದರಾದ್ರಿ ಪಾಳಿಯ
25 . . . ಸಾಧು[ರ]ಕ್ಷಾಪರತ್ವಂ ನೃಪ . . . . . . . . . ಪೃಥುಭುವನ . . .
26 . . . . . . . . [ಮುಖ್ಯೋ] . . . . ನಾದಂ ॥೪॥
27 . . . . ಸ್ಮರತಿ ಜಪ . . . . . . . . . . . . ನಿರಸಿಕೃತಪದ.
28 ಮಂ ನ್ಯಸ್ತ . . . . . ಭಿಕ್ಷು . . . . . . . . . ಕಾಮಿನೀ–
29 . . . . . . ವಿಧಾನೇ . . . ಧರಾಮರಾ . . . . . ದರಾ–
30 . . . ಧರ . . . . . . . ಯೊವ[ದ್ವಾ . .]ಮ . . . . .
31 ರಾಂ। ರಾಮ . . . . . . . . . . . ನಿತ್ಯಸಃ
32 ಬ್ರಹ್ಮ . . . . . . . ದ್ರೇಂದ್ರ . . . . . ಮುದ್ರಃ .
33 . . . . . . . ವಿಮಲಮುನಿಯೋ [ವ್ಯೋಮ] . . . . . .
34 . . . . ನಾಯ . . . . . . . . ಪಾತು ವೋ [ವಿಶ್ವ] . . ॥೬॥

## No. 266

*(B. K. No. 110 of 1932-33)*

HOMMARAḌI, HAVERI TALUK, DHARWAR DISTRICT

*Hero-stone set up in front of the temple of Vīrabhadra*

**Rāmachandra—A. D. 1289**

This damaged record belonging to the reign of **Rāmachandradeva** is dated in **Śaka 1211, Virōdhi, Āsvija ba. 6, Thursday,** corresponding regularly to **A. D. 1289, October 6, Thursday.**

It records the death of a hero (name lost) in a fight. He is stated to be the son of **Vasuva-Nāyaka.**

**Text**

1 ಶ್ರೀಮತು ಯಾದವನಾರಾಯಣಂ ಭುಜಬಳಪ್ರೌಢಪ್ರತಾಪಚಕ್ರವರ್ತ್ತಿ ಶ್ರೀವೀರರಾಮಚಂದ್ರ
ದೇವರಾ[ಯ] ರಾಜ್ಯೋದಯದ ಶಕವರುಷ ೧೨೧೧ನೆಯ ವಿರೋ[ಧಿ]–
2 ಸಂವತ್ಸರದ ಆಶ್ವಿಜ ಬ ೬ ಗು . . . . . . . ಳಯ . .
ಮ್ಯೆ ಯನಂ ಕೊಣವತಿಯ .

